# ಕೆ.ವಿ. ಸುಬ್ಬಣ್ಣ: ಕನ್ನಡ ಸಂಸ್ಕೃತಿ ಚಿಂತನೆಯ ಸ್ವರೂಪ

ಹಂಪಿ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ

## ನಿಬಂಧ

'ಅಕ್ಷರ' ಗ್ರಂಥಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಾರ್ಗದರ್ಶಕರು :

**ಡಾ. ಬಸವರಾಜ ಕಲ್ಗುಡಿ**

ನಿರ್ದೇಶಕರು, ಕನ್ನಡ ಅಧ್ಯಯನ ಕೇಂದ್ರ,

ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ,

ಬೆಂಗಳೂರು – ೫೬೦ ೦೫೬



ಸಂಶೋಧನಾ ವಿದ್ಯಾರ್ಥಿ :

**ವೆಂಕಟೇಶ್ ಆರ್.ಡಿ.**




**ಪ್ರೊ. ಕಿ.ರಂ. ನಾಗರಾಜ್**

**ನಿರ್ದೇಶಕರು, ಕಾವ್ಯ ಮಂಡಲ**

ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿದೆ.

೨೦೦೨

607

# ಮಾರ್ಗದರ್ಶಕರ ಪ್ರಮಾಣ ಪತ್ರ

**ವೆಂಕಟೇಶ್ ಆರ್.ಡಿ. ಇವರು "ಕೆ.ವಿ. ಸುಬ್ಬಣ್ಣ: ಕನ್ನಡ ಸಂಸ್ಕೃತಿ ಚಿಂತನೆಯ ಸ್ವರೂಪ"** ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಮಾರ್ಗದರ್ಶಕರು
**ಡಾ. ಬಸವರಾಜ ಕಲ್ಗುಡಿ**
ನಿರ್ದೇಶಕರು, ಕನ್ನಡ ಅಧ್ಯಯನ ಕೇಂದ್ರ,
ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು – ೫೬೦ ೦೫೬

ದಿನಾಂಕ : 31.08.2007
ಸ್ಥಳ : ಬೆಂಗಳೂರು

**ಅಧ್ಯಯನ ಕೇಂದ್ರ :** ಕಾವ್ಯಮಂಡಲ,
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ, ಬಸವನಗುಡಿ,
ಬೆಂಗಳೂರು–೫೬೦ ೦೦೪.

607

# ದೃಢೀಕರಣ ಪತ್ರ

**ಕೆ.ವಿ. ಸುಬ್ಬಣ್ಣ: ಕನ್ನಡ ಸಂಸ್ಕೃತಿ ಚಿಂತನೆಯ ಸ್ವರೂಪ"** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಸ್ವತಂತ್ರ ಅಧ್ಯಯನದ ಮೂಲಕ ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲು **ಡಾ. ಬಸವರಾಜ ಕಲ್ಗುಡಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಬಳಸಿಕೊಂಡಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : ೦೨.೦೮-೦೨
ಸ್ಥಳ : ಬೆಂಗಳೂರು

R.D.
ಸಂಶೋಧಕ
**(ವೆಂಕಟೇಶ್ ಆರ್.ಡಿ.)**

**ಅಧ್ಯಯನ ಕೇಂದ್ರ :** ಕಾವ್ಯಮಂಡಲ,
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ, ಬಸವನಗುಡಿ,
ಬೆಂಗಳೂರು-೫೬೦ ೦೦೪.

ಹಂಪನಾ ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

# ಅಧ್ಯಯನದ ಸ್ವರೂಪ, ಉದ್ದೇಶ ಮತ್ತು ವ್ಯಾಪ್ತಿ

ಕೆ.ವಿ. ಸುಬ್ಬಣ್ಣ ಬಹುಮುಖಿ ಸಂಸ್ಕೃತಿಯ ಚಿಂತಕರಾಗಿದ್ದು, ತುಂಬಾ ಮಹತ್ವದ ಬರಹಗಾರರಾಗಿದ್ದರು. ಇವರು ಕೇವಲ ಸಾಹಿತ್ಯಕೇಂದ್ರಿತವಾಗಿ ಮಾತ್ರ ಮಾತನಾಡದೆ ತಮ್ಮ ಸುತ್ತಮುತ್ತಲ ಪರಿಸರವನ್ನು ಮುಂದಿಟ್ಟುಕೊಂಡು ಬಹುಮುಖಿ ಸಂಸ್ಕೃತಿಯ ಚಿಂತನೆಗೆ ಮುಂದಾದವರು. ಕನ್ನಡ ಸಂಸ್ಕೃತಿಯ ನೆಲೆಗಳನ್ನು ಕುರಿತು ಗಾಢವಾಗಿ ಚಿಂತಿಸಿದವರು, ಮುನ್ನೋಟವನ್ನು ಕೊಟ್ಟವರು. ಸಾಹಿತ್ಯ, ರಾಜಕೀಯ, ಕೃಷಿ, ಸಿನಿಮಾ, ರಂಗಭೂಮಿ, ಕಲೆಗಳು, ಸಂಸ್ಥೆಗಳು, ಶಿಕ್ಷಣ, ವ್ಯಕ್ತಿಚಿತ್ರಗಳು ಮತ್ತು ಇತಿಹಾಸ ನಿರ್ಮಾಪಕರು, ಹೀಗೆ ಅನೇಕ ಕ್ಷೇತ್ರಗಳ ಕುರಿತು ಅವುಗಳ ಹಿನ್ನೆಲೆಯಲ್ಲಿ ಬಹುಮುಖಿ ವಿಮರ್ಶೆ ಕುರಿತ ಚಿಂತನಾ ಕ್ರಮವೊಂದನ್ನು ಅವರ ಬರಹಗಳು, ಭಾಷಣಗಳಲ್ಲಿ ಕಾಣಬಹುದು. ಪ್ರಸ್ತುತ, ಈ ಪ್ರಬಂಧ (ಅಧ್ಯಯನ)ದ ಉದ್ದೇಶವೂ ಕೆ.ವಿ.ಸುಬ್ಬಣ್ಣನವರ ಕನ್ನಡ ಸಂಸ್ಕೃತಿ ಚಿಂತನೆಯ ಸ್ವರೂಪದ ಕುರಿತು ವಿಚಾರ ಮಾಡುವುದಾಗಿದೆ.

ಸುಬ್ಬಣ್ಣನವರನ್ನು ಓದುವುದೆಂದರೆ, ಸಮಗ್ರವಾಗಿ ಒಂದು ಸಂಸ್ಕೃತಿಯ ಗ್ರಹಿಕೆಯ ನೆಲೆಗಳನ್ನು ಅರಿಯುವುದೆಂದರ್ಥ. ಎಲ್ಲಾ ಕಾಲದ ಸಂಸ್ಕೃತಿಯ ಒಳ-ಹೊರ ಪದರುಗಳನ್ನು ಜಿಜ್ಞಾಸಿಸುವ ಅವರ ಚಿಂತನಾ ಲಹರಿಗೆ ಸೀಮಿತ ರೇಖೆಗಳೆಂಬುದಿಲ್ಲ. ಹಾಗಾಗಿಯೇ, ಅವರ ಚಿಂತನಾ ಬೇರುಗಳು ಎಲ್ಲಾ ಕ್ಷೇತ್ರಗಳನ್ನೂ ತಬ್ಬಿಕೊಂಡಿವೆ. ಹೀಗೆಂದ ಮಾತ್ರಕ್ಕೆ ಸುಬ್ಬಣ್ಣ ಪ್ರತಿಯೊಂದು ಕ್ಷೇತ್ರದಲ್ಲೂ 'ತಜ್ಞ'ರೆಂದರ್ಥವಲ್ಲ. ವಿಮರ್ಶಕ ಟಿ.ಪಿ. ಅಶೋಕರು ಹೇಳುವಂತೆ "ಅವರು ಜೀವನವನ್ನು ಸಾಧ್ಯವಾದಷ್ಟೂ, ತಮ್ಮ ಎಲ್ಲಾ ಪರಿಮಿತಿಗಳಲ್ಲಿ, ಇಡಿಯಾಗಿ ನೋಡಲು ಪ್ರಯತ್ನಿಸುತ್ತಿದ್ದಾರೆ. ವಿವಿಧ ಘಟಕಗಳನ್ನು ಅವುಗಳ ಅನನ್ಯ ನಿಜತ್ವದಲ್ಲಿ ಕಾಣುತ್ತಲೇ ಎಲ್ಲವನ್ನೂ ಒಟ್ಟಂದದಲ್ಲಿ ಗಮನಿಸುವುದು ಅವರ ವಿಶೇಷ". ಸುಬ್ಬಣ್ಣ ಒಬ್ಬ ಸಾಮಾನ್ಯ ಮನುಷ್ಯನಾಗಿ ಏಕಕಾಲದಲ್ಲಿ ವಿವಿಧ ರೀತಿಯ ಕ್ಷೇತ್ರಗಳಿಗೆ ಪ್ರತಿಸ್ಪಂದಿಸುತ್ತಾ ಯೋಚಿಸುತ್ತಾರೆ. 'ಅಡಿಕೆ'ಯ ಬಗೆಗಾಗಲಿ, ಸಾಹಿತ್ಯ, ರಾಜಕಾರಣ, ಸಿನೆಮಾ, ಪ್ರಜಾಪ್ರಭುತ್ವ ವ್ಯವಸ್ಥೆ, ಕೃಷಿ, ಕಲೆ, ಶ್ರೇಷ್ಠತೆಯೆಂಬ ಪರಿಕಲ್ಪನೆಯ ಬಗೆಗಾಗಲಿ ವ್ಯಕ್ತಿ-ವ್ಯಕ್ತಿಗಳ ನಡುವೆ ಕಂದರವನ್ನು ನಿರ್ಮಿಸಿ, ಜಾತೀಯತೆಯನ್ನು ಪೋಷಿಸುವ 'ಸಮ್ಮೇಳನ'ಗಳು ಮತ್ತು ಅತ್ಯಂತ ಮಾನವೀಯ ವ್ಯಕ್ತಿತ್ವವುಳ್ಳ ಪ್ರಸಿದ್ಧ ವ್ಯಕ್ತಿಗಳು ಹೀಗೆ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ವಿದ್ಯಮಾನಗಳ ಬಗೆಗಾಗಲಿ ಯಾವುದೇ ಪೂರ್ವಾಗ್ರಹವಿಲ್ಲದೆ ಪರಿಶೀಲನೆಗೊಳಪಡಿಸುತ್ತಾ, ಪ್ರತಿಕ್ರಿಯೆ ವ್ಯಕ್ತಪಡಿಸಿ ಎಚ್ಚರಿಸುವುದು ಸುಬ್ಬಣ್ಣನವರ ವಿಶಿಷ್ಟತೆಯಾಗಿದೆ.

ಮೇಲಿನ ಬಹುಮುಖ್ಯ ವಿಚಾರಧಾರೆಗಳನ್ನು ಕುರಿತು ಚರ್ಚಿಸಲು ಐದು ಪ್ರತ್ಯೇಕ ಅಧ್ಯಾಯಗಳನ್ನು ಮಾಡಿಕೊಂಡಿರುತ್ತೇನೆ. ಭಾಷೆ, ಸಾಹಿತ್ಯ-ಸಂಸ್ಕೃತಿ, ಕಲೆಗಳು, ಸಾಂಸ್ಕೃತಿಕ ಅಂಗಸಂಸ್ಥೆಗಳು, ಪರಿಸರ ಮತ್ತು ಅನುವಾದ, ಇವೆಲ್ಲವುಗಳನ್ನೂ ಈ ಅಧ್ಯಾಯಗಳು ಒಳಗೊಂಡಿರುತ್ತವೆ. ಒಟ್ಟಾರೆ, ನನ್ನ ಬರಹದ ವ್ಯಾಪ್ತಿಯ ಸ್ವರೂಪವನ್ನು ಸಂಕ್ಷಿಪ್ತವಾಗಿ ತಿಳಿಸಲು ಯತ್ನಿಸುತ್ತೇನೆ.

ಭಾಷೆಯ ಬಗೆಗೆ ಅತ್ಯಂತ ಆಳವಾಗಿ ಚಿಂತಿಸುವ ಸುಬ್ಬಣ್ಣ 'ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು' ಕೃತಿಯ ಮೂಲಕ ಭಾಷಾ ಸ್ವರೂಪ ಮತ್ತು ಭಾಷೆಯ ವೈವಿಧ್ಯತೆಗಳನ್ನು ಅರ್ಥೈಸುವ ರೀತಿ ಅನುಪಮವಾದದ್ದು, ಕ್ರಿಸ್ತಶಕ ೯ನೇ ಶತಮಾನದಲ್ಲಿ ರಚಿತವಾದ 'ಕವಿರಾಜಮಾರ್ಗ' ಕೃತಿಯೊಡಲಲ್ಲಿ

ಗರ್ಭೀಕರಿಸಿಕೊಂಡಿರುವ ಕನ್ನಡ ನಾಡು–ನುಡಿ, ಸಮುದಾಯ, ಕನ್ನಡ ಸಂಸ್ಕೃತಿಯ ಬಗೆಗೆ ಆಯಾ ಕಾಲಘಟ್ಟಗಳಲ್ಲಿ ಕಟ್ಟಿಕೊಳ್ಳಬೇಕಾದ ಧ್ವನಿಪೂರ್ಣ ಎಚ್ಚರ, ನಿರ್ಮಿಸಿಕೊಳ್ಳಬೇಕಾದ ಸೃಜನಶೀಲತೆ ಮತ್ತು ಆ ಕೃತಿಯ ಮೂಲಕ ಕನ್ನಡ ಸಂಸ್ಕೃತಿಯ ಸ್ವರೂಪದ ವೈವಿಧ್ಯತೆಗಳನ್ನು ವಿಸ್ತರಿಸುತ್ತಾ, ಬೆಳೆಸುತ್ತಾ ಹೋಗುವ ಕ್ರಮವೊಂದನ್ನು ಅರಿಯಲು ಸುಬ್ಬಣ್ಣನವರ ಈ ಬರಹ ನೆರವಾಗುತ್ತದೆ. ಜಾಗತೀಕರಣದ ಸಂದರ್ಭದಲ್ಲಿ ಪ್ರಸ್ತುತ ಕನ್ನಡ ಭಾಷೆಯ ಬಿಕ್ಕಟ್ಟುಗಳನ್ನು ಕುರಿತಂತೆ ಬಗೆಹರಿಸಿಕೊಳ್ಳಬೇಕಾದ ಸಮಸ್ಯೆಗಳ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಬಯಸುತ್ತೇನೆ.

ಸಾಹಿತ್ಯವನ್ನು ಕುರಿತ ಸುಬ್ಬಣ್ಣನವರ ವಿಭಿನ್ನ ಆಲೋಚನೆಗಳು ಅನೇಕ ಒಳನೋಟಗಳನ್ನು ಕೊಟ್ಟು ಹೊಸ ಓದಿಗೆ ಅನುವು ಮಾಡಿಕೊಡುತ್ತಲೇ ಬಂದಿವೆ. ಪಂಪನನ್ನು ಕುರಿತ ಅವರ ಗ್ರಹಿಕೆಯ ನೆಲೆಗಳು ಆದುವರೆವಿಗೂ ಒಂದೇ ವಿಧಾನದಲ್ಲಿದ್ದ ವಿಮರ್ಶೆಯ ಸ್ವರೂಪ (ನೋಡುವ ಕ್ರಮ)ವನ್ನು ಬದಲಾಯಿಸಿದ್ದನ್ನು ಇಲ್ಲಿ ನೆನೆಯಬಹುದು. ಹಾಗೆಯೇ ಅನಂತಮೂರ್ತಿಯವರ ಕಾದಂಬರಿ 'ತ್ರಿವಳಿ', 'ಆಧುನಿಕ ಕನ್ನಡ ಸಾಹಿತ್ಯಕ್ಕೆ ಹೀಗೆ ಬನ್ನಿ' –ಮುಂತಾದ ಲೇಖನಗಳು ಕೂಡ ಗಮನ ಸೆಳೆಯುವಂತಹುಗಳಾಗಿವೆ.

ಸುಬ್ಬಣ್ಣನವರು ಸಾಹಿತ್ಯವನ್ನು ವಿಶ್ಲೇಷಿಸುವ ಸಂದರ್ಭದಲ್ಲಿ ಸಾಹಿತ್ಯವೇ ಸರ್ವಸ್ವ ಎಂಬ ಧೋರಣೆಗೆ ವಿರುದ್ಧವಾದ ನಿಲುವೊಂದನ್ನು ತಳೆದು ಖಂಡತುಂಡವಾಗಿ ನಿರಾಕರಿಸುತ್ತಾರೆ. ಅವರೇ ಹೇಳಿರುವಂತೆ, "ಒಟ್ಟಿನಲ್ಲಿ ನಿತ್ಯ ಹಗಲು ನಾವು ನಡೆದಾಡುವ ಬೀದಿಯನ್ನೂ, ಬದುಕನ್ನೂ ಮರೆತು ಸಾಹಿತ್ಯವೊಂದೇ ಜಗತ್ತು ಎನ್ನುವ ಹಾಗೆ, ಸೆಮಿನಾರ್ ಕೋಣೆಯ ನಿರ್ವಾತ ವಿಸ್ಮೃತಿಯಲ್ಲಿ –ನಿದ್ದೆ ನಡೆದಾಟದ ತರ– ನಡೆವ ಚರ್ಚೆಗಳು ನನ್ನಲ್ಲಿ ವಿಚಿತ್ರ ಭಯ ಹುಟ್ಟಿಸುತ್ತವೆ". ಸಾಹಿತ್ಯದಲ್ಲಿ ಹಾಸುಹೊಕ್ಕಾಗಿದ್ದ ಶ್ರೇಷ್ಠತೆಯ ಕುರಿತ 'ಅಪ್ಪುಗೆ'ಯ ಮನೋಭಾವವನ್ನು ವಿಶ್ಲೇಷಣೆಗೊಳಪಡಿಸಿದ ಪರಿ, ವ್ಯಾಖ್ಯಾನಿಸಿದ ರೀತಿ ಸುಬ್ಬಣ್ಣನವರ ಸೂಕ್ಷ್ಮತೆಗೆ ಒಂದು ಸಣ್ಣ ಉದಾಹರಣೆಯಷ್ಟೆ. ಇಂತಹ ಸೂಕ್ಷ್ಮ ಚಿಂತನಾಲಹರಿಗಳನ್ನು ಅಧ್ಯಯನ ಸಂದರ್ಭದಲ್ಲಿ ಹೆಕ್ಕಿ ತೆಗೆಯಬಹುದು. ಉದಾಹರಣೆಗೆ, 'ಅಡಿಕೆಯ ಮಾನ', 'ಭೂತದ ಸವಾಲಿಗೆ ನಮ್ಮ ಜವಾಬು', 'ಸೌಂದರ್ಯ ಸ್ಪರ್ಧೆಯನ್ನು ಪ್ರತಿಭಟಿಸುವುದೇತಕ್ಕೆ?', 'ಜಾತಿ ಪದ್ಧತಿ ಕುರಿತು', 'ಗುಜರಾತ್ ಸ್ವಗತ' –ಮುಂತಾದವುಗಳನ್ನು ಹೆಸರಿಸಬಹುದು.

ಕನ್ನಡ ಸಂಸ್ಕೃತಿಗೆ 'ನೀನಾಸಂ' ನೀಡಿದ ಕೊಡುಗೆ ಅನನ್ಯವಾದುದು. ಕನ್ನಡ ಸಂಸ್ಕೃತಿಯ ಶ್ರೀಮಂತಿಕೆಯನ್ನು ವೃದ್ಧಿಸಿ ಅಂತಾರಾಷ್ಟ್ರೀಯ ಮಟ್ಟಕ್ಕೆ ಕೊಂಡೊಯ್ದ ಇದರ ಸಾಧಕ–ಭಾದಕಗಳನ್ನು ಕುರಿತು ಸಮಾಲೋಚಿಸುವುದು ಈ ಅಧ್ಯಯನದ ಮತ್ತೊಂದು ಉದ್ದೇಶವಾಗಿದೆ. ಸಿನಿಮಾ, ನಾಟಕ, ರಂಗಭೂಮಿ ಕುರಿತ ಅವರ ಆಲೋಚನೆಗಳು ಹಲವು ಒಳದಾರಿಗಳನ್ನು ತೆರೆಯಿಸಿಕೊಡುತ್ತವೆ. 'ರಶೋಮನ್ ಅವಲೋಕನ' ಬರಹವು ಸಿನಿಮಾ ಮಾಧ್ಯಮವನ್ನು ಕುರಿತ ದೀರ್ಘ ಲೇಖನವಾಗಿದೆ. ಇದೊಂದು ರೀತಿ ಸಿನಿಮಾಗೆ ಸಂಬಂಧಿಸಿದ ಕೈಪಿಡಿಯೆಂತಲೂ ಹೇಳಬಹುದು. ಚಿತ್ರವನ್ನು ಗ್ರಹಿಸುವ ವಿನ್ಯಾಸ ಕ್ರಮ ಹಾಗೂ ಚಿತ್ರ ನಿರ್ಮಾಣದ ಸಾಮಗ್ರಿ, ದೃಶ್ಯ ಸಂಯೋಜನೆ ಇವುಗಳ ಕುರಿತ ತಾತ್ವಿಕ ಚಿಂತನೆ ಇಲ್ಲಿದೆ. ಒಟ್ಟಾರೆ, ಸಿನಿಮಾ ಮಾಧ್ಯಮವನ್ನು ಬಳಸಿಕೊಂಡು ಏನೆಲ್ಲಾ ವಿಷಯಗಳನ್ನು ಅದ್ಭುತವಾಗಿ ಹೇಳಬಹುದು ಎಂಬುದನ್ನು ತಿಳಿಸುವುದು ಈ ಲೇಖನದ ಆಶಯವಾಗಿದೆ.

ಅನುವಾದ, ಸುಬ್ಬಣ್ಣನವರ ಮತ್ತೊಂದು ಆಸಕ್ತಿಯ ಕ್ಷೇತ್ರವಾಗಿದೆ. 'ದಶರೂಪಕ', 'ರಂಗದಲ್ಲಿ ಅಂತರಂಗ'ದಂತಹ ಬೃಹತ್ ಗ್ರಂಥಗಳನ್ನು ಅನುವಾದಿಸಿದ್ದಾರೆ. ಅಲ್ಲದೆ, ಬ್ರೆಕ್ಟ್‌ನ 'ತಾಯಿ', 'ಸೆಜುವಾನ್ ನಗರದ ಸಾಧ್ವಿ', 'ಮೂರು ಕಾಸಿನ ಸಂಗೀತ ನಾಟಕ'ಗಳನ್ನು ಕನ್ನಡಕ್ಕೆ ತಂದಿದ್ದಾರೆ ಮತ್ತು ಗಾಂಧಿ–ಲೋಹಿಯಾ ಬರಹಗಳನ್ನು, ಮ್ಯಾಕ್ಸಿಂ ಗಾರ್ಕಿ ಕತೆಗಳನ್ನು ಹಾಗೂ ಚಿತ್ರಲೇಖನಗಳನ್ನು ಅನುವಾದಿಸಿದ್ದಾರೆ. ಒಟ್ಟಾರೆ, ಅನುವಾದವನ್ನು ಕುರಿತಂತೆ ಸುಬ್ಬಣ್ಣನವರ ಗ್ರಹಿಕೆಗಳೇನು ಎಂಬುದರ ಬಗೆಗೆ ವಿಚಾರ ಮಾಡಲಾಗುತ್ತದೆ.

ಜೀವಪರವಾದ ನಿಲುವುಗಳು ಮತ್ತು ಮನುಷ್ಯರ ನಡುವಿನ ಸಹಮತದ, ಒಡನಾಡಿಯ ಬಾಳ್ವೆ ಇವುಗಳು ಸುಬ್ಬಣ್ಣನವರ ಕೆಲವು ತಾತ್ವಿಕ ಚಿಂತನೆಗಳಾಗಿವೆ ಇಂತಹ ನಿಲುವುಗಳನ್ನು ತಮ್ಮ ಒಟ್ಟು ಬರಹಗಳ ಕೇಂದ್ರ ಕಾಳಜಿಯನ್ನಾಗಿ ರೂಪಿಸಿಕೊಂಡಿದ್ದರಿಂದಲೇ ಭಿನ್ನವಾಗಿ ಚಿಂತಿಸಲು ಸಾಧ್ಯವಾದದ್ದು ಎನಿಸುತ್ತದೆ. ಸುಬ್ಬಣ್ಣ, ತೇಜಸ್ವಿ ನಗರಾಭಿಮುಖಿಗೆ ವಿರುದ್ಧವಾದ ಚಲನೆಯಲ್ಲಿ ಜೀವಿಸಿದವರು. ಮಲೆನಾಡಿನಂತಹ ಪರಿಸರದಲ್ಲಿ ಜೀವನದ ವೈವಿಧ್ಯತೆಗಳನ್ನು ಕಂಡುಕೊಳ್ಳಲು ಯತ್ನಿಸಿದ ಸುಬ್ಬಣ್ಣನವರು ಪರಿಸರ ಮತ್ತು ಮನುಷ್ಯರ ನಡುವಿನ ಭಿನ್ನತೆಗಳನ್ನು ಬಹುಸೂಕ್ಷ್ಮವಾಗಿ ಗುರುತಿಸಲು ಪ್ರಯತ್ನಪಟ್ಟವರು. ಹೀಗಾಗಿ, ನಿಸರ್ಗವೂ ಅವರ ಚಿಂತನೆಯ ಕೇಂದ್ರ ಕಾಳಜಿಗಳಲ್ಲೊಂದಾಗಿದೆ. ಪರಿಸರವನ್ನು ಕುರಿತ ಅವರ ಗ್ರಹಿಕೆಯ ನೆಲೆಗಳು ಎಂತಹವು ಎಂಬುದು ಕುತೂಹಲಕರಿಯಾದ ವಿಷಯವಾಗಿದೆ.

ಒಟ್ಟು ಈ ಮೇಲಿನ ಎಲ್ಲಾ ಕ್ಷೇತ್ರಗಳಿಗೂ ಸಂಬಂಧಿಸಿದಂತೆ ವಿಚಾರ ಮಾಡುವಾಗ ಸಮಕಾಲೀನ ಸನ್ನಿವೇಶದಲ್ಲಿ ಸುಬ್ಬಣ್ಣನವರ ಪ್ರಾಮುಖ್ಯತೆ ಏನು? ಸುಬ್ಬಣ್ಣನವರು ಭಿನ್ನವಾಗಿ ನಿಲ್ಲುವ ಬಗೆ ಹೇಗೆ? ಮತ್ತು ಸಾಂಸ್ಕೃತಿಕ ಸಂದರ್ಭದಲ್ಲಿ ಸುಬ್ಬಣ್ಣನವರು ವ್ಯಕ್ತಪಡಿಸಿದ ಎಚ್ಚರ, ಪ್ರತಿಕ್ರಿಯೆ ಮೊದಲಾದವುಗಳನ್ನು ಕುರಿತು ಚರ್ಚಿಸುವುದು ನನ್ನ ಅಧ್ಯಯನದ ಉದ್ದೇಶವಾಗಿದೆ.

ಅಧ್ಯಾಯ-೧

# ಪ್ರಸ್ತುತ ಕನ್ನಡ ಭಾಷೆಯ ಸಮಸ್ಯೆಗಳ ಹಿನ್ನೆಲೆಯಲ್ಲಿ ಸುಬ್ಬಣ್ಣವರ ಚಿಂತನೆಗಳು ('ಕವಿರಾಜಮಾರ್ಗ'ದ ಹಿನ್ನೆಲೆಯಲ್ಲಿ)

ಅಧ್ಯಾಯ-೧

# ಪ್ರಸ್ತುತ ಕನ್ನಡ ಭಾಷೆಯ ಸಮಸ್ಯೆಗಳ ಹಿನ್ನೆಲೆಯಲ್ಲಿ ಸುಬ್ಬಣ್ಣವರ ಚಿಂತನೆಗಳು ('ಕವಿರಾಜಮಾರ್ಗ'ದ ಹಿನ್ನೆಲೆಯಲ್ಲಿ)

ಅಧ್ಯಾಯ-೧

# ಪ್ರಸ್ತುತ ಕನ್ನಡ ಭಾಷೆಯ ಸಮಸ್ಯೆಗಳ ಹಿನ್ನೆಲೆಯಲ್ಲಿ ಸುಬ್ಬಣ್ಣವರ ಚಿಂತನೆಗಳು ('ಕವಿರಾಜಮಾರ್ಗ'ದ ಹಿನ್ನೆಲೆಯಲ್ಲಿ)

ಸುಮಾರು ೮-೯ನೇ ಶತಮಾನದಲ್ಲಿ 'ಕವಿರಾಜಮಾರ್ಗ' ಪಠ್ಯವನ್ನು ಪ್ರಸ್ತುತದಲ್ಲಿ ಹೊಸ ಓದಿಗೆ ಅನುವು ಮಾಡಿಕೊಡುವಂತೆ ಪ್ರೇರೇಪಿಸುವ ಕೆ.ವಿ. ಸುಬ್ಬಣ್ಣನವರ 'ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು' ಕೃತಿಯು ಪರ್ಯಾಯ ಚಿಂತನೆಯನ್ನು ರೂಪಿಸಿದೆ. ಪ್ರಸ್ತುತ ಕನ್ನಡ ಭಾಷೆಯ ಸಮಸ್ಯೆಗಳಿಗೆ 'ಕವಿರಾಜಮಾರ್ಗ' ಪಠ್ಯದ ಮೂಲಕ ಹೊಸ ಓದಿಗೆ ಕೀಲಿಕೈಯನ್ನು ದೊರಕಿಸಿಕೊಟ್ಟಿದೆ. ಕವಿಯು ಮತ್ತು ರಾಜರು ಕೂಡಿ ಈ ಪಠ್ಯವನ್ನು ಸೃಷ್ಟಿಸಿದ್ದಾರೆ ಎಂಬ ಗ್ರಹಿಕೆ ಸುಬ್ಬಣ್ಣನವರ ಹೊಸ ಓದಿಗೆ ಮೂಲಾಧಾರವಾಗಿದೆ. ಸುಬ್ಬಣ್ಣನವರ ಕೃತಿಯು ಮೂರು ಪ್ರಬಂಧಗಳಿಂದ ಕೂಡಿದ್ದು, ಸಂಶೋಧನೆ, ವಿಮರ್ಶೆ ಮತ್ತು ಚಿಂತನಶೀಲತೆ ಎಲ್ಲವೂ ಬೆರೆತುಕೊಂಡಿದೆ.

ಸುಬ್ಬಣ್ಣನವರು ಕೃತಿಯ ಆರಂಭದಲ್ಲಿ ಮಾತನಾಡುತ್ತಾ ಪ್ರಾಚೀನ ಕೃತಿಗಳ ಬಗೆಗಿನ ಸಂಶೋಧನೆಯು ಹಿಂದಿನವರಿಗಿಂತ ಭಿನ್ನವಾದ ಹೊಸ ಒಳನೋಟಗಳನ್ನು ಹೊಳೆಯಿಸಿ ಕೊಡುವಂತಹ ಸೃಜನಶೀಲ ಸಾಹಸವಾಗಬೇಕೆಂದು ಭಿನ್ನವಿಸಿಕೊಳ್ಳುತ್ತಾರೆ. ಬೇರೆಯವರ ಕುರಿತು ಹೇಳಿದ ಈ ಮಾತುಗಳನ್ನು ಸ್ವತಃ ತಾವೆ ಈ ಕೃತಿಯ ಮೂಲಕ ಸಾಧಿಸಲು ಹೊರಡುತ್ತಾರೆಯೆನ್ನುವುದು ಗಮನಾರ್ಹ.

ಬಹಳಷ್ಟು ಮಂದಿ ಶ್ರೀವಿಜಯನ 'ಕವಿರಾಜಮಾರ್ಗ' ಕೃತಿಯನ್ನು ದಂಡಿಯ 'ಕಾವ್ಯಾದರ್ಶ' ಮತ್ತು ಭಾಮಹನ 'ಕಾವ್ಯಾಲಂಕಾರ' ಗ್ರಂಥಗಳ ಅನುವಾದ ಕೃತಿಯೆಂದು ತಿಳಿದಿದ್ದರು. ಈ ರೀತಿಯ ತಿಳುವಳಿಕೆ ಅಥವಾ ನಂಬಿಕೆಯನ್ನು ಒಡೆಯುವುದರ ಮೂಲಕ ಸುಬ್ಬಣ್ಣನವರು ಹೊಸ ಓದಿಗೆ, ಪರ್ಯಾಯ ಚಿಂತನೆಗಳಿಗೆ ತಮ್ಮನ್ನು ತಾವು ತೆರೆದುಕೊಳ್ಳುತ್ತಾರೆ. ಅವರ ಪ್ರಕಾರ 'ಕವಿರಾಜಮಾರ್ಗ' ಕೃತಿಯಲ್ಲಿ ಅಲಂಕಾರಶಾಸ್ತ್ರ ಮತ್ತು ಅನುವಾದವನ್ನು ಮೀರಿದ ಅನೇಕ ಮಹತ್ತ್ವದ ವಿಷಯಗಳು ಸಂಕಲಿತಗೊಂಡಿವೆ. ವ್ಯಾಕರಣ, ಛಂದಶ್ಯಾಸ್ತ್ರ, ಭಾಷಾಶ್ಯಾಸ್ತ್ರ ಮತ್ತು ಕನ್ನಡ ನಾಡು-ನುಡಿ ಸಮುದಾಯ ಹಾಗೂ ಕನ್ನಡ ಸಾಂಸ್ಕೃತಿಕ ರಾಜಕಾರಣದ ಕುರಿತ ಚಿಂತನೆಗಳು ಹರಳುಗಟ್ಟಿಕೊಂಡಿವೆ.

ಕ್ರಿ.ಶ. ಸುಮಾರು ೮೭೦ರಲ್ಲಿ 'ಕವಿರಾಜಮಾರ್ಗ' ಕೃತಿಯು ರಚಿತವಾಯಿತೆಂದು ಹೇಳಲಾಗಿದೆ. ಆ ಕಾಲದಲ್ಲಿ ಕನ್ನಡ ನಾಡು-ನುಡಿ ಸಮುದಾಯ, ಸಂಸ್ಕೃತಿ ಕುರಿತು ಮಂಡಿಸಿದ ವಿಚಾರಗಳು ಇಂದಿಗೂ ಕೈದೀವಿಗೆಯಾಗಿ ಉಳಿದಿರುವುದರಿಂದಲೇ ಸುಬ್ಬಣ್ಣನವರಿಗೆ ಈ ಕೃತಿಯು ಅತ್ಯಂತ ಮಹತ್ವವೆನಿಸಿದೆ. ಈ ಮಹತ್ವತೆಗೆ ಇನ್ನೊಂದು ಪ್ರಮುಖ ಕಾರಣವಿದೆ. ಕನ್ನಡ ಎಂಬ ಹೆಸರು ಮೊತ್ತ-ಮೊದಲಿಗೆ ಭಾಷೆಯ ಮೂಲಕ ಅಧಿಕೃತವಾಗಿ ದಾಖಲಾಗಿದ್ದು ಲಭಿಸುವುದು 'ಕವಿರಾಜಮಾರ್ಗ'ದಲ್ಲಿಯೇ. ಕನ್ನಡ, ಕರ್ನಾಟಕದ ವ್ಯುತ್ಪತ್ತಿಯ ಕುರಿತು ಇತಿಹಾಸದ ಆಧಾರಗಳನ್ನು ಮಂಡಿಸುವ ಸಂದರ್ಭದಲ್ಲಿ ಈ ಮಾತನ್ನು ಸುಬ್ಬಣ್ಣನವರು ಹೊರಗೆಡುವುತ್ತಾರೆ.

‘ಕವಿರಾಜಮಾರ್ಗ’ವನ್ನು ಐತಿಹಾಸಿಕ ಹಿನ್ನೆಲೆಯೊಂದಿಗೆ ಓದುವುದರ ಮೂಲಕ ಸಮಕಾಲೀನ ಸಂದರ್ಭದಲ್ಲಿ ಆದರಿಂದ ವಿವಿಧ ರೀತಿಯ ಅರ್ಥವಂತಿಕೆಗಳನ್ನು ಹೊಳೆಯಿಸಿಕೊಂಡು ಸಮಸ್ಯೆಗಳಿಗೆ ಪರಿಹಾರೋಪಾಯಗಳನ್ನು ಕಂಡುಕೊಳ್ಳುವುದೇ ‘ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು’ ಕೃತಿಯ ಪ್ರಮುಖ ಉದ್ದೇಶಗಳಲ್ಲೊಂದಾಗಿದೆ.

ಸುಬ್ಬಣ್ಣನವರ ಪ್ರಕಾರ ಕನ್ನಡ ಭಾಷೆಯ ಅನನ್ಯತೆ ಯಾವುದೆಂದರೆ, ಜಗತ್ತಿನ ಬಹುತೇಕ ಎಲ್ಲಾ ರೀತಿಯ ಭಾಷೆ–ಸಂಸ್ಕೃತಿ, ಜನಾಂಗ, ಜಾತಿ, ಮತ ಮತ್ತು ಧರ್ಮಗಳನ್ನು ಮೇಳೈಸಿಕೊಂಡಿರುವ ವಿಶ್ವಭಾಷೆ, ಸಹಿಷ್ಣುತೆ ಕನ್ನಡಭಾಷೆಯ ಮತ್ತೊಂದು ಗುಣ–ಲಕ್ಷಣವೆ ಆಗಿದೆ. ಕನ್ನಡ ಮತ್ತು ತಮಿಳು ದಕ್ಷಿಣ ಭಾರತದ ಎರಡು ಪ್ರಮುಖ ದ್ರಾವಿಡ ಭಾಷೆಗಳಾಗಿವೆ. ಹಿಂದಿನಿಂದಲೂ ಕನ್ನಡ ಭಾಷೆಯು ಎದುರಿಸಿದಷ್ಟು ಆಕ್ರಮಣಗಳನ್ನು, ತಮಿಳು ಭಾಷೆಯು ಎದುರಿಸಲಿಲ್ಲ. ಚರಿತ್ರೆಯಿಂದ ಉದ್ದಕ್ಕೂ ಸಹ್ಯತೆ, ತಂತ್ರ ಮತ್ತು ಅನುಸಂಧಾನಗಳ ಮೂಲಕ ತನ್ನತನವನ್ನು ಉಳಿಸಿಕೊಳ್ಳಲು ಹೋರಾಟ ನಡೆಸಿದ್ದು ಈ ಭಾಷೆಯ ಹೆಗ್ಗಳಿಕೆಯಾಗಿದೆ.

ಕನ್ನಡ ಭಾಷೆಯ ಮಹಿಮೆ ನಿಜಕ್ಕೂ ಎಂಥದ್ದು ಎಂಬುದರ ಕುರಿತು ಸುಬ್ಬಣ್ಣನವರು ಈ ರೀತಿ ಹೇಳಿಕೊಳ್ಳುತ್ತಾರೆ:

> “ನೆಲದಲ್ಲಿ ನೆಟ್ಟುಕೊಂಡ ಬೀಜವು ಅಲ್ಲೇ ಮೊಗ್ಗು ಮೊಗವಡೆದು ಮುನ್ನೂಕಿಕೊಂಡು ಕ್ರಮೇಣ ಬೃಹದಾಕಾರದ ಮರವಾಗಿ ಉಪಬೃಂಹಿತವಾಗಿ ಬೆಳೆಯುತ್ತದೆ. ಬಾನನ್ನು ತುಂಬುತ್ತದೆ’ ಅನಂತರ ತನ್ನ ಬೃಹತ್ತನ್ನು ಕಿರುಬೀಜವೊಂದರಲ್ಲಿ ಮರಳಿ ಆಕುಂಚನಗೊಳಿಸಿ ಸಂಗೋಪಿಸಿಕೊಳ್ಳುತ್ತದೆ.”[೧]

ಅಂದರೆ ಕನ್ನಡಭಾಷೆಯು ತಾನು ಸರ್ವವ್ಯಾಪಿಯಾಗಿ ಬೆಳೆಯಲು ಮತ್ತು ಸಂರಕ್ಷಿಸಿಕೊಳ್ಳಲು ಅನುಸರಿಸಿದ ‘ಅನುಸಂಧಾನ’ವೆಂಬ ವ್ರತದ ಕುರಿತು ಈ ಮಾತುಗಳನ್ನು ಹೇಳಿದ್ದಾರೆ.

ಭಾಷೆಯ ಸ್ವರೂಪವನ್ನು ಕುರಿತು ಚರ್ಚಿಸುವುದು ಸುಬ್ಬಣ್ಣನವರ ಬಹುಮುಖ್ಯ ಆಸಕ್ತಿಗಳಲ್ಲೊಂದೆನಿಸುತ್ತದೆ. ಅವರೇ ಹೇಳಿಕೊಳ್ಳುವ ಈ ಮಾತುಗಳನ್ನು ಗಮನಿಸಿದರೆ ತಿಳಿಯುತ್ತದೆ. ‘ಆಧುನಿಕ ಕನ್ನಡ ಸಾಹಿತ್ಯಕ್ಕೆ ಹೀಗೆ ಬನ್ನಿ’ ಎಂಬ ಲೇಖನದಲ್ಲಿ “. . . ಎಲ್ಲ ಮನುಷ್ಯರಿಗೂ ಭಾಷೆಯು ಮುಖ್ಯವಾಗುತ್ತದೆ. ಅನ್ನದ ಪೋಷಣೆಯಿಂದ ನನ್ನನ್ನು ನಾನು ಬೆಳೆಸಿಕೊಳ್ಳುವ ಹಾಗೆ, ಭಾಷೆ ಸಂಭಾಷಣೆಗಳಿಂದ ಸಾಮೂಹಿಕ ಅರಿವನ್ನು ಸಾಧಿಸಿಕೊಳ್ಳುತ್ತಾ, ನನ್ನನ್ನು ಸಾಮಾಜಿಕನನ್ನಾಗಿ ಉಳಿಸಿಕೊಳ್ಳಬೇಕಾಗುತ್ತದೆ. ಇದಕ್ಕಾಗಿ,

---

೧ ಸುಬ್ಬಣ್ಣ, ಕೆ.ವಿ. – ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು, ಅಕ್ಷರ ಪ್ರಕಾಶನ, ಸಾಗರ, ೨೦೦೦, ಪು.೧೫.

ವ್ಯವಸಾಯಗಾರನಾದ ನನಗೂ ಭಾಷೆ, ಅಭಿವ್ಯಕ್ತಿ ಮುಖ್ಯವಾಗುತ್ತದೆ. ವ್ಯವಸಾಯದಷ್ಟೇ ಮುಖ್ಯ ಅಥವಾ ಹೆಚ್ಚು ಕೊರತೆಯಿರುವ ವಸ್ತುವಾದ್ದರಿಂದ ವ್ಯವಸಾಯಕ್ಕಿಂತ ಹೆಚ್ಚು ಮುಖ್ಯ"[೨] ಎನ್ನುತ್ತಾರೆ.

ಈ ಮೇಲಿನ ಮಾತುಗಳ ಹಿನ್ನೆಲೆಯಲ್ಲಿ ಭಾಷೆಯ ಕುರಿತು ಸುಬ್ಬಣ್ಣನವರ ಚಿಂತನೆಗಳನ್ನು ವಿಚಾರಮಾಡಬಹುದೆನಿಸುತ್ತದೆ.

'ಕವಿರಾಜಮಾರ್ಗ' ಗ್ರಂಥವು ತನಗಿಂತ ಪೂರ್ವದ ಅನೇಕ ಸಂಗತಿಗಳನ್ನು ಗಮನದಲ್ಲಿರಿಸಿಕೊಂಡು ರಚಿತವಾದದ್ದಾಗಿದೆ. ಮೊದಲೇ ಹೇಳಿದಂತೆ ಈ ಗ್ರಂಥವು ಅಲಂಕಾರಿಕ ಕೃತಿಯೊಂದೋ, ದಂಡಿ-ಭಾಮಹರ ಕೃತಿಗಳ ಅನುವಾದವೆಂದೋ ಗ್ರಹಿಸಲಾಗಿತ್ತು. ಆದರೆ ಸುಬ್ಬಣ್ಣನವರು ಈ ಎಲ್ಲ ಸಂಗತಿಗಳನ್ನು ಬದಿಗಿರಿಸಿ, ಅದನ್ನು ರಾಜಕೀಯ, ಸಾಂಸ್ಕೃತಿಕ ಕೃತಿಯನ್ನಾಗಿ ಕಂಡಿದ್ದಾರೆ. ಗ್ರಂಥದ ಮೂಲೆಯಲ್ಲೆಲ್ಲೋ ಮರೆಯಾಗಿರುವ ಭಾಷೆ-ಸಮುದಾಯ- ರಾಜ್ಯ- ರಾಜಕಾರಣದ ನೆಲೆಗಳನ್ನು ತಮ್ಮ ಸೂಕ್ಷ್ಮ ಒಳನೋಟಗಳಿಂದ ಅಧ್ಯಯನ ಮಾಡಿದ್ದಾರೆ. ಈ ಗ್ರಂಥದಲ್ಲಿ ತಳುಕು ಹಾಕಿಕೊಂಡಿರುವ ಇಂತಹ ವಿಷಯಗಳನ್ನು ಗಮನಿಸಿದ್ದರಿಂದಲೇ, ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಬರುವ 'ಪ್ರಭು-ವೀರ-ಮಂತ್ರಶಕ್ತಿ' ಎಂಬ ತ್ರಿಕೂಟಕ್ಕಿರುವ ಭಿನ್ನವಾದ 'ಭಾಷೆ-ಜನ-ರಾಜ್ಯ' ('ಕವಿರಾಜಮಾರ್ಗ' ಗ್ರಂಥದ ಪೀಠಿಕಾ ಭಾಗದಲ್ಲಿ ಬರುವ)ಗಳೆಂಬ ತ್ರಿಕೂಟ ಶಕ್ತಿಗಳು ವೈಶಿಷ್ಟ್ಯದಿಂದ ಕೂಡಿವೆ ಎಂಬುದನ್ನು ಸುಬ್ಬಣ್ಣನವರು ಗ್ರಹಿಸಿಕೊಂಡಿದ್ದಾರೆ. ಅಲ್ಲದೆ, ಪ್ರಾಕೃತ -ಅಪಭ್ರಂಶ -ಪೈಶಾಚಿ ಮುಂತಾದ ಸ್ಥಳೀಯ ಭಾಷೆಗಳ ಸಾಹಿತ್ಯಗಳು, ಶಾಸನಗಳು, ಇತಿಹಾಸ ಮತ್ತು ಕನ್ನಡ ಭಾಷೆಗೆ ಸ್ಪಷ್ಟರೂಪವನ್ನು ಕೊಡಲು ಕಾರಣವಾದ ರಾಜಮನೆತನಗಳು ಹಾಗೂ ಕಲಾ ಮಾಧ್ಯಮಗಳಾದ ಕಲೆ, ವಾಸ್ತುಶಿಲ್ಪ, ಚಿತ್ರ-ಸಂಗೀತ ಮೊದಲಾದ ಪ್ರಮುಖ ಅಂಶಗಳನ್ನು ಗಮನದಲ್ಲಿರಿಸಿಕೊಂಡು ರಚಿತವಾಗಿದೆ ಎಂಬ ವೈಶಿಷ್ಟ್ಯವನ್ನು ಸುಬ್ಬಣ್ಣನವರು ತಮ್ಮ ಸೂಕ್ಷ್ಮ ದೃಷ್ಟಿಯಿಂದ ಕಂಡುಕೊಂಡಿದ್ದಾರೆ. ಒಟ್ಟಾರೆ 'ಕವಿರಾಜಮಾರ್ಗ' ಪಠ್ಯವನ್ನು ಅದು ರಚಿತವಾದ ಐತಿಹಾಸಿಕ ಸಂದರ್ಭದ ಹಿನ್ನೆಲೆಯಲ್ಲಿ ತಮ್ಮ ಇಡೀ ಪ್ರಬಂಧದ ಮೂಲಕ ಅಧ್ಯಯನ ಮಾಡುತ್ತಾರೆ.

ತಾನು ಯಾವ ನೆಲೆಯಿಂದ ಈ ಪಠ್ಯವನ್ನು ಗ್ರಹಿಸಿಕೊಳ್ಳುತ್ತಿದ್ದೇನೆ ಎಂಬುದರ ಕುರಿತು ಸುಬ್ಬಣ್ಣನವರು, ". . . ನನ್ನ ಬರವಣಿಗೆಯ ಇತಿಹಾಸ ಪಠ್ಯಾರ್ಥಗಳೆಂಬುವನ್ನೇ ಅವಲಂಬಿಸಿರುವಂತೆ ಕಾಣಿಸಿಕೊಂಡರೂ ಅದರ ಏಕಾಗ್ರ ಗಮನವಿರುವುದೆಲ್ಲಾ ನಮ್ಮ ಪ್ರಸ್ತುತಕ್ಕೆ ಉಪಯುಕ್ತವೂ ಪ್ರಸ್ತುತ ಸಮುದಾಯಕ್ಕೆ ಸಮ್ಮತವೂ ಆಗುವ ಒಂದು ಮನೋನಿರ್ಮಿತಿಯನ್ನು ಕಟ್ಟಿಕೊಳ್ಳುವ ಬಗ್ಗೆಯೇ ಇದನ್ನು ನೆನಪಿಟ್ಟುಕೊಂಡು ಮುಂದುವರಿಯಬಹುದು"[೩] ಎನ್ನುತ್ತಾರೆ.

ಸುಬ್ಬಣ್ಣನವರ ಅಧ್ಯಯನದ ಗಮನವೆಲ್ಲಾ ಯಾವ ದಿಕ್ಕಿನ ಕಡೆಗೆ ಕೇಂದ್ರಿಕೃತವಾಗಿದೆಯೆನ್ನುವುದನ್ನು ಮೇಲಿನ ಮಾತುಗಳು ಸ್ಪಷ್ಟಪಡಿಸುತ್ತವೆ.

---

೨ ಸುಬ್ಬಣ್ಣ, ಕೆ.ವಿ., ಲೇಖನ ಸಂಕಲನ ೧೯೫೪-೨೦೦೪, ಅರೆಶತಮಾನದ ಅಲೆಬರಹಗಳು, ಸಂಪಾದನೆ, ಟಿ.ಪಿ. ಅಶೋಕ, ಅಕ್ಷರ ಪ್ರಕಾಶನ, ಸಾಗರ, ೨೦೦೪, ಪು.೨೯೮.

೩ ಸುಬ್ಬಣ್ಣ, ಕೆ.ವಿ., ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು, ಅಕ್ಷರ ಪ್ರಕಾಶನ, ಸಾಗರ, ೨೦೦೦, ಪು.೬೯.

ಈ ಗ್ರಂಥವು ಪ್ರಸ್ತುತ 'ಕನ್ನಡ'ಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಇರುವ ಪ್ರಮುಖ 'ಕೈಪಿಡಿ'ಯಾಗಿ ಅವರಿಗೆ ಕಂಡಿದೆ. ಭಾಷಾ ಹೋರಾಟಗಳು, ಚಳುವಳಿಗಳು, ಪ್ರತ್ಯೇಕ ರಾಜ್ಯಗಳು, ಗಡಿವಿವಾದಗಳು ಮತ್ತು ದೇಶವಿಭಜನೆ ಹಾಗೂ ಅಂತರರಾಷ್ಟ್ರೀಯ ಗಡಿವಿವಾದ ಮೊದಲಾದ ಸಮಸ್ಯೆಗಳಿಗೆ 'ಕವಿರಾಜಮಾರ್ಗ'ವನ್ನು ಮಾರ್ಗದರ್ಶಕ ಕೈಪಿಡಿಯನ್ನಾಗಿ ಕಂಡಿದ್ದಾರೆ. ಒಂದು ಪ್ರಾಚೀನ ಕೃತಿಯನ್ನು ಧ್ವನಿಪೂರ್ಣ ಸೃಜನಶೀಲತೆಯ ಮೂಲಕ ನಮ್ಮ ಕಾಲದಲ್ಲಿ ಅರ್ಥೈಸಿಕೊಂಡ ಬಗೆ ಇದಾಗಿದೆ. 'ಕವಿರಾಜಮಾರ್ಗ'ವು ನಮ್ಮ ಕಾಲದ ಅಥವಾ ಆಯಾಯಾ ಕಾಲಘಟ್ಟದ ಕೃತಿ ಎಂಬ ಸಂಗತಿಯನ್ನು ಮನವರಿಕೆ ಮಾಡಿಸಿಕೊಟ್ಟದ್ದು, ಸುಬ್ಬಣ್ಣನವರು ಭಿನ್ನವಾಗಿ ಚಿಂತಿಸುವ ಶೈಲಿಗೆ ಉದಾಹರಣೆಯಾಗಿದೆ. ಇದನ್ನು ಅವರ ಬರಹ, ಭಾಷಣಗಳಲ್ಲೂ ಕಾಣಬಹುದು. ಯಾವುದೇ ಸಂಗತಿಯನ್ನು ಹೊಸ ಓದು ಮತ್ತು ಹೊಸ ಒಳನೋಟಗಳ ಮೂಲಕವೇ ಪ್ರಸ್ತುತಪಡಿಸುತ್ತಾರೆ. 'ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು' ಕೃತಿಯಲ್ಲಿ ಅವರ ಚಿಂತನೆಯ ಸ್ವರೂಪ ಪ್ರಖರವಾಗಿದ್ದು, ಪ್ರಬುದ್ಧತೆಯಿಂದ ಕೂಡಿದೆ ಎನ್ನಬಹುದು.

**ವ್ಯಾಕರಣಶಾಸ್ತ್ರ ಮತ್ತು ಕಾವ್ಯಮೀಮಾಂಸೆಯನ್ನು ಕುರಿತಂತೆ :**

ಕನ್ನಡವು ಸಂಸ್ಕೃತದಿಂದ ವರ್ಣವೃತ್ತಗಳನ್ನು ತನ್ನೊಳಗೆ ತಂದುಕೊಳ್ಳುವಾಗ 'ಯತಿ'ಯ ಪ್ರಯೋಜನವನ್ನು ಕಂಡುಕೊಂಡಿತು. 'ಯತಿ' ಬಗೆಗೆ ಭಾಮಹ ಮತ್ತು ದಂಡಿಯರಿಗಿಂತ ಭಿನ್ನವಾದ ಅರ್ಥವನ್ನು ಪಡೆದುಕೊಂಡಿತು. 'ಯತಿ' ಎಂದರೆ ನಿಯತವಾದ ನಿಲುಗಡೆ ಎಂಬುದಕ್ಕೆ ಬದಲಾಗಿ 'ಉಸಿರ್ವತಾರಾರಿ' ಎಂದು ಅರ್ಥೈಸಿಕೊಂಡಿತು. ಅಂದರೆ ಲಯಬದ್ಧತೆಯಿಂದ ಪದ್ಯವನ್ನು ಪಠನ ಮಾಡುವಾಗ ಉಸಿರು ತೆಗೆಯುವ ಜಾಗ ಎಂದು. ಹೀಗೆ 'ನಿಯತಯತಿ'ಯನ್ನು ತ್ಯಜಿಸಿದ್ದರಿಂದ ಮುಂದೆ ಕನ್ನಡದ ಪರಿಸರಕ್ಕೆ ಒಗ್ಗಬಹುದಾದ 'ಖ್ಯಾತ ಕರ್ಣಾಟಕ ವೃತ್ತಗಳು' ಬಳಕೆಯಾದವು ಮತ್ತು ಕನ್ನಡಕ್ಕೆ ಸತತಂ ಪ್ರಾಸಂ ಎಂದು ಹೇಳಿ ಪ್ರಾಸವನ್ನು ಉಳಿಸಿಕೊಂಡು ಯತಿಯ ವಿಲಂಘನದಿಂದ ಕನ್ನಡದಲ್ಲಿ (ಛಂದೋಬಂಧದಲ್ಲಿ) ವಿಭಿನ್ನ ರೀತಿಯ ಲಯಗಳನ್ನು ಸೃಷ್ಟಿಸಲು ಸಾಧ್ಯವಾಯಿತೆಂಬುದನ್ನು ಪಂಪನ ಪದ್ಯಗಳ ಮೂಲಕ ಉದಾಹರಣೆ ಸಮೇತ ಸುಬ್ಬಣ್ಣನವರು ವಿವರಿಸುತ್ತಾರೆ.

ದಂಡಿ –ಭಾಮಹರಿಬ್ಬರಿಗೂ ಸಂಸ್ಕೃತವೆ 'ದೈವೀವಾಕ್' ಭಾಷೆಯಾಗಿದ್ದು ಉಳಿದ ಸ್ಥಳೀಯ ಭಾಷೆಗಳಿಗೆ ಗಮನಹರಿಸಲಿಲ್ಲ. ಆದರೆ 'ಕವಿರಾಜಮಾರ್ಗ'ವು ಸಂಸ್ಕೃತ ಮತ್ತು ಪ್ರಾಕೃತಾದಿ ಭಾಷೆಗಳ ನಿರಂತರ ಜಿಜ್ಞಾಸೆಯಲ್ಲಿ ಕನ್ನಡತ್ವವನ್ನು ಕಟ್ಟಬೇಕಿದೆ ಮತ್ತು ತನ್ನ ಅಸ್ತಿತ್ವವನ್ನು ಕಾಲಕಾಲಕ್ಕೆ ಸ್ಥಾಪಿಸಿಕೊಳ್ಳಬೇಕಾಗಿದೆ. ಹಾಗಾಗಿಯೇ ಎಲ್ಲದರೊಂದಿಗೂ ಅನುಸಂಧಾನ, ಸಾತತ್ಯ ಅಗತ್ಯ. ಒಂದು ಬಿಂದುವಿನಲ್ಲಿ ನಿಂತು ಕನ್ನಡದ ವಿಶೇಷ ಪ್ರಕಾರಗಳಾದ 'ಗದ್ಯಕಥೆ' 'ಬೆದಂಡೆ' 'ಚಿತ್ರಣ' ಮೊದಲಾದವುಗಳನ್ನು ದಾಖಲಿಸುತ್ತಾರೆ. ಮತ್ತೊಂದು ಬಿಂದುವಿನಲ್ಲಿ ಸಂಸ್ಕೃತ ಹಾಗೂ ಪ್ರಾದೇಶಿಕ ಭಾಷೆಗಳೊಂದಿಗೂ ಸಂಬಂಧವಿರಿಸಿಕೊಂಡಿರುತ್ತದೆ. ಇದೆಲ್ಲವೂ ಏಕಕಾಲದಲ್ಲಿ ಒಟ್ಟೊಟ್ಟಿಗೆ ಜರುಗುವ ಪ್ರಕ್ರಿಯೆಗಳಾಗಿವೆ.

ಭಾಷೆಯ ಸಂಸ್ಕೃತಿ, ಸ್ವರೂಪವನ್ನು ಕುರಿತು ಜಿಜ್ಞಾಸಿಸುವ ಕ್ರಮವೇ ಚಲನಶೀಲತೆಯಿಂದ ಕೂಡಿದ್ದಾಗಿರುತ್ತದೆ. ಈ ಗ್ರಂಥದ ಹೆಗ್ಗಳಿಕೆಯ ಕುರಿತು ಮಾತನಾಡುವಾಗ ಸುಬ್ಬಣ್ಣನವರು, "ಕವಿರಾಜಮಾರ್ಗ'ವು ಜಡಶಾಸ್ತ್ರ ಗ್ರಂಥದ ಹಾಗೆ ಎಲ್ಲವನ್ನೂ ಸ್ಥೂಲ ಲಕ್ಷಣದಲ್ಲಿ ಸಾಯಿಸಿ ಸೆರೆ ಹಿಡಿಯುವ ಚಪಲವುಳ್ಳದ್ದಲ್ಲ. ಕವಿಪ್ರತಿಭೆಯಿಂದ ದ್ವಂದ್ವ ಸೂಕ್ಷ್ಮಗಳನ್ನು ಅರಿವುಗೊಳಿಸಿಕೊಳ್ಳಬೇಕೆಂಬ ಎಚ್ಚರವಿರುವುದು

ಈ ಗ್ರಂಥದ 'ಅತಿಶಯ'ವಾಗಿದೆ. ಆದ್ದರಿಂದಲೇ ಈ ಗ್ರಂಥವು ಕನ್ನಡದ ಬಗ್ಗೆ ಗರ್ವತಾಳಿಯೋ ಅಥವಾ ಸಂಸ್ಕೃತದ ಬಗ್ಗೆ ದೈನ್ಯತಾಳಿಯೋ ಕ್ಲೇಶಗೊಳ್ಳದೆ ಸ್ವಸ್ಥಚಿತ್ತವುಳ್ಳದ್ದಾಗಿದೆ"[4] ಎನ್ನುತ್ತಾರೆ.

ಮಾರ್ಗಭೇದಗಳ ಕುರಿತು ದಂಡಿಯು 'ಗೌಡೀ' ಮತ್ತು 'ವೈದರ್ಭೀ' ಮಾರ್ಗಗಳ ಭಿನ್ನತೆಯನ್ನು ತಿಳಿಸುತ್ತಾ ಅವುಗಳಿಗೆ ಉತ್ತರ –ದಕ್ಷಿಣ ಮಾರ್ಗಗಳೆಂಬ ಬೇರೊಂದು ಹೆಸರನ್ನು ಕೊಡುತ್ತಾನೆ. ಆದರೆ ಭಾಮಹನು ಈ ಮಾರ್ಗಭೇದದ ಪರಿಕಲ್ಪನೆಯನ್ನು ಒಪ್ಪದೆ, ಇವುಗಳು ಕಾವ್ಯದಲ್ಲಿ ಬೆರೆತುಹೋಗಿವೆ ಎಂದು ಪ್ರತಿಪಾದಿಸುತ್ತಾನೆ. 'ಕವಿರಾಜಮಾರ್ಗ'ವು ಇಬ್ಬರ ಕೃತಿಗಳನ್ನು ಸಮಾಲೋಚಿಸುತ್ತದೆ. ಮೇಲ್ನೋಟಕ್ಕೆ ದಂಡಿಯನ್ನೇ ನಕಲು ಮಾಡಿದಂತೆ ತೋರಿದರೂ ಗೌಡೀ –ವೈದರ್ಭೀ ಎಂಬ ಹೆಸರನ್ನು ಸರಿಸಿ ಉತ್ತರ–ದಕ್ಷಿಣ ಎಂಬ 'ಮಾರ್ಗಭೇದ'ವನ್ನು ಪ್ರಸ್ತಾಪಿಸುತ್ತದೆ. ಅಂದರೆ ಮಾರ್ಗಭೇದದ ಬಗ್ಗೆ ಕನ್ನಡದಲ್ಲಿ ನಿಖರತೆಯಿಲ್ಲದಿರುವುದನ್ನು ತಿಳಿಸುತ್ತಾ 'ಮಾರ್ಗಭೇದ'ವನ್ನು ಸ್ಥಾಪಿಸಲು ಹವಣಿಸುತ್ತದೆ. ಸಂಸ್ಕೃತದಲ್ಲಿರುವ 'ಗೌಡೀ–ವೈದರ್ಭೀ' ಮಾರ್ಗಭೇದಗಳನ್ನು, ಕನ್ನಡದಲ್ಲಿ ಉತ್ತರ–ದಕ್ಷಿಣ ಮಾರ್ಗಭೇದಗಳನ್ನಾಗಿ ಕಲ್ಪಿಸಿದುದು ಅದರ ವಿಶಿಷ್ಟತೆಯಾಗಿದೆ ನಂತರ ಮುಂದೆ 'ವಕ್ರೋಕ್ತಿ'ಗೆ ಉತ್ತರ ಮಾರ್ಗದ ಮತ್ತು 'ಸ್ವಭಾವೋಕ್ತಿ'ಗೆ ದಕ್ಷಿಣ ಮಾರ್ಗದ ಲಕ್ಷಣಗಳನ್ನು ನಿರೂಪಿಸಿ ದಕ್ಷಿಣಮಾರ್ಗ ಹಾಗೂ ಉತ್ತರಮಾರ್ಗಗಳಿಗೆ ಪರಸ್ಪರ ಹತ್ತು ಗುಣಗಳನ್ನು (ಲಕ್ಷಣಗಳನ್ನು) ಹೆಸರಿಸುತ್ತದೆ.

ಹೀಗೆ ಕವಿಪ್ರತಿಭೆಯ ಅರಿವು ಎಚ್ಚರದಿಂದ ತನ್ನ 'ಅತಿಶಯ'ವನ್ನು ಮೆರೆದಿರುವ ರೀತಿಯೆ ಸುಬ್ಬಣ್ಣನವರಿಗೆ ಅದ್ಭುತವಾಗಿ ಕಂಡಿದೆ. ಇದು ಒಂದು ಭಾಷೆಯ ನಿರಂತರ ಚಲನಶೀಲತೆ, ಶ್ರೀಮಂತಿಕೆಯನ್ನೂ ತಿಳಿಸುತ್ತದೆ. ಒಂದು ಭಾಷೆಯು ಬೆಳೆಯಬೇಕಾದರೆ ತನ್ನ ಸುತ್ತಲಿನ ಪರಿಸರ ಮತ್ತು ನೆರೆಯ ಭಾಷೆಗಳಿಂದಲೂ ಪ್ರಭಾವಿತಗೊಂಡು ಅಲ್ಲಿಂದ ದೊರಕುವ ಉತ್ತಮಾಂಶಗಳನ್ನು ಸ್ವೀಕರಿಸಿ, ಸಂಗೋಪಿಸಿಕೊಳ್ಳಬೇಕಾಗುತ್ತದೆ. ಹೀಗೆ ಸಂಗೋಪಿಸಿಕೊಳ್ಳುತ್ತಲೆ, ಸ್ವೋಪಜ್ಞತೆಯನ್ನು ತನ್ನ ಸೂಕ್ಷ್ಮತೆಯಿಂದ ನಿರಂತರವಾಗಿ ಕಾಪಾಡಿಕೊಂಡು ಬರಬೇಕಾಗುತ್ತದೆ. ಆ ರೀತಿಯ ಕಾಯಕವನ್ನು 'ಕವಿರಾಜಮಾರ್ಗ' ಕೃತಿಯು ನಿರ್ವಹಿಸುತ್ತಿದೆ.

'ಕವಿರಾಜಮಾರ್ಗ'ವು ಕಾವ್ಯಮೀಮಾಂಸೆಯ ಕೃತಿಯಲ್ಲ. ಆದರೆ ಕಾವ್ಯಮೀಮಾಂಸೆಗೆ ಸಂಬಂಧಿಸಿದಂತೆ ಮೂರನೆಯ ಪರಿಚ್ಛೇದದಲ್ಲಿ ಪ್ರಸ್ತಾಪವಿರುವುದನ್ನು ಸುಬ್ಬಣ್ಣನವರು ತಿಳಿಸುತ್ತಾರೆ. ಜಾತಿ–ರೂಪಕ, ಉಪಮಾ, ಶ್ಲೇಷ, ಉತ್ಪ್ರೇಕ್ಷೆ, ಹೇತು, ವಿಭಾವನ, ಆವ, ಉದಾತ್ತ– ಮೊದಲಾದ ೩೫ ಅಲಂಕಾರಗಳನ್ನು ಹೆಸರಿಸಿತು. 'ಧ್ವನಿ' ಎಂಬ ಹೊಸದಾದ ೩೬ನೇ ಅಲಂಕಾರವನ್ನು ಹೊಸದಾಗಿ ಸೇರಿಸಿದುದು ಈ ಗ್ರಂಥದ ವೈಶಿಷ್ಟ್ಯವಾಗಿದೆ. ತನ್ನ ಸಮಕಾಲೀನನಾದ ಆನಂದವರ್ಧನನು ಸಂಸ್ಕೃತದಲ್ಲಿ 'ಧ್ವನಿ'ಯೆಂಬ ಕಾವ್ಯತತ್ತ್ವವನ್ನು 'ಧ್ವನ್ಯಾಲೋಕ' ಕೃತಿಯಲ್ಲಿ ಮೊದಲ ಬಾರಿಗೆ ಸ್ಥಾಪಿಸಿದನು. ಉತ್ತರದಲ್ಲಿ ನಡೆಯುತ್ತಿದ್ದ ಚರ್ಚೆಗಳನ್ನೆಲ್ಲಾ ಗಮನಿಸುತ್ತಿದ್ದ 'ಕವಿರಾಜಮಾರ್ಗ'ವು ತುರ್ತಾಗಿ ಸಂಸ್ಕೃತ ಕಾವ್ಯಮೀಮಾಂಸೆಯಲ್ಲಿದ್ದ 'ಧ್ವನಿ'ಯನ್ನು ತನ್ನೊಳಗೆ ಸೇರಿಸಿಕೊಂಡಿತು.

ಕಾವ್ಯತತ್ತ್ವದಲ್ಲಿ 'ಧ್ವನಿ'ಯ ಪ್ರಾಮುಖ್ಯತೆ ಅಗಾಧವಾದುದು. ಒಂದು ಕಾವ್ಯದ ಮಹತ್ವವನ್ನು ಪರಿಗಣಿಸುವಾಗ 'ಧ್ವನಿ'ಯ ಪಾತ್ರವನ್ನು ಅಲ್ಲಿ ಅವಲೋಕಿಸಲಾಗುತ್ತದೆ. ಇಂತಹ ಪ್ರಮುಖ ಸಂಗತಿಯೆ

---

೪ ಅದೇ, ಪು.೭೮

ಸುಬ್ಬಣ್ಣನವರಿಗೆ ಕುತೂಹಲಕರವಾಗಿ ಕಂಡಿದೆ. 'ಕವಿರಾಜಮಾರ್ಗ'ದ ಮುಂಗಾಣ್ಕೆ, ದೂರದರ್ಶಿತ್ವ ಅವರನ್ನು ಸೋಜಿಗಗೊಳಿಸಿದೆ.

ಕಾವ್ಯಮೀಮಾಂಸೆಯಲ್ಲಿ ಪ್ರಧಾನವಾಗಿ ಚರ್ಚೆಯಾಗುವ ಸ್ಥಾಯಿಭಾವ ಮತ್ತು ರಸಗಳನ್ನು ಕುರಿತಂತೆ ಪ್ರಸ್ತಾಪಿಸಲಾಗಿದೆ. ಭರತನಿಂದ ಭಾಮಹನ ತನಕ ಎಲ್ಲರೂ ಎಂಟು ಸ್ಥಾಯಿಭಾವ ಮತ್ತು ರಸಗಳನ್ನು ಉಲ್ಲೇಖಿಸಿದ್ದರು. ಆದರೆ 'ಕವಿರಾಜಮಾರ್ಗ'ವು 'ಶಾಂತ' ಎಂಬ ಒಂಬತ್ತನೆ ರಸವನ್ನು ಹೇಳಿತು. ಇದು ಮುಂದೆ ಕನ್ನಡಕಾವ್ಯಕ್ಕೆ ಪ್ರಯೋಜನವಾದ ತಳಪಾಯವನ್ನು ಹಾಕಿಕೊಟ್ಟಿತು. ಅಲ್ಲದೆ 'ಕರುಣ'ವೆಂಬ ರಸವನ್ನು 'ಕರುಣಾ' ಎಂದು ತಿದ್ದುಪಡಿ ಮಾಡಿಕೊಂಡಿತು. ಈ ರೀತಿಯ ಕನ್ನಡತ್ವದ ಕಲ್ಪನೆ ಸಾಧ್ಯವಾದದ್ದೇ ಸ್ವೈರಣೆಯಿಂದ. ಕವಿರಾಜಮಾರ್ಗವು ಇಡೀ ಕನ್ನಡತ್ವದ ಕಲ್ಪನೆಯನ್ನು 'ಸಹಿಷ್ಣುತೆ' ಎಂಬ ಮನೋಭೂಮಿಕೆಯ ಮೇಲೆ ನಿರ್ಮಿಸಿದೆ ಮತ್ತು ಅದೇ ರೀತಿ ಐತಿಹಾಸಿಕವಾಗಿಯೂ, ವರ್ತಮಾನದಲ್ಲಿ ನಿಂತು ಭವಿಷ್ಯತ್ತನ್ನು ರೂಪಿಸಿಕೊಳ್ಳುತ್ತದೆ.

ಸುಬ್ಬಣ್ಣನವರು ಕವಿರಾಜಮಾರ್ಗದ ಈ ವಿವೇಕವನ್ನು ಮತ್ತೆ ಮತ್ತೆ ತಮ್ಮ ಕೇಂದ್ರಪ್ರಜ್ಞೆಗೆ ತಂದುಕೊಳ್ಳುವುದರ ಮೂಲಕ 'ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು' ಕೃತಿಯಲ್ಲಿ, ಭಾಷೆಯ ಸ್ವರೂಪದ ಬಗೆಗೆ, ಅಲಂಕಾರ – ವ್ಯಾಕರಣಗಳ ಬಗೆಗೆ ಮತ್ತು ಕಾವ್ಯಮೀಮಾಂಸೆಗೆ ಸಂಬಂಧಪಟ್ಟ ವಿಚಾರಗಳ ಬಗೆಗೆ, ಸಮುದಾಯದ ಬಗೆಗೆ, ರಾಷ್ಟ್ರ ನಿರ್ಮಾಣ ಪ್ರಕ್ರಿಯೆಯ ಬಗೆಗೆ ಹಾಗೂ ಕನ್ನಡವು ದಕ್ಕಿಸಿಕೊಳ್ಳಬೇಕಾದ ಅರಿವು, ಎಚ್ಚರದ ಬಗೆಗಿನ ತಮ್ಮ ಚಿಂತನಾಲಹರಿಯನ್ನು ಹರಿಯಬಿಟ್ಟಿದ್ದಾರೆ.

**ಭಾಷೆ, ಅಧಿಕಾರವನ್ನು ನಿಯಂತ್ರಿಸುವ ಸಾಧನವಾಗಿ :**

'ಕವಿರಾಜಮಾರ್ಗ'ವು ಅಲಂಕಾರ, ವ್ಯಾಕರಣ, ಕಾವ್ಯ – ಮೊದಲಾದ ಸಂಗತಿಗಳಿಗಷ್ಟೇ ಸೀಮಿತವಾಗಿದ್ದರೆ, ಈ ಗ್ರಂಥವು ಸುಬ್ಬಣ್ಣನವರಿಗೆ ಅತ್ಯಂತ ಮಹತ್ವದಾಗಿ ಕಾಣುತ್ತಿರಲಿಲ್ಲ. ಭಾಷೆ– ಸಾಮ್ರಾಜ್ಯ ಸಂಬಂಧದ ನೇಪಥ್ಯದಲ್ಲಿ ಕನ್ನಡ ರಾಜ್ಯ ನಿರ್ಮಾಣ ಪ್ರಯತ್ನದ ಕೇಂದ್ರಪ್ರಜ್ಞೆಯಾಗಿ ಚಿಂತಿಸುತ್ತಿದೆ. ಈ ಕಾರಣದಿಂದಲೇ ಸುಬ್ಬಣ್ಣನವರು ಐತಿಹಾಸಿಕ ಚೌಕಟ್ಟಿನಲ್ಲಿ ಕುತೂಹಲಕಾರಿಯಾದ ನೆಬ್ರಿಜಾನ 'ಗ್ರಮಾಟಿಕಾ ಕಾಸ್ಟೆಲ್ಲನಾ' ಎಂಬ ಸ್ಪಾನಿಶ್ ವ್ಯಾಕರಣ ಗ್ರಂಥವನ್ನು ಮತ್ತು ತಮಿಳಿನ 'ತೊಳ್ಕಾಪ್ಪಿಯಂ' ಗ್ರಂಥವನ್ನು ತಮ್ಮ ಅಧ್ಯಯನದ ಸಂದರ್ಭದಲ್ಲಿ ಚರ್ಚಿಸುತ್ತಾರೆ. ನಮ್ಮ ಕಾಲದ ಭಾಷಾವಾರು ಪ್ರಾಂತ್ಯಕ್ಕೆ ಸಂಬಂಧಪಟ್ಟ ವಿಷಯಗಳು, ವಿವಿಧ ಮಾದರಿಯ ಕನ್ನಡ ಚಳುವಳಿಗಳನ್ನು ಪರಿಶೀಲಿಸಿಕೊಳ್ಳುತ್ತಾರೆ ಒಟ್ಟಾರೆ 'ಕವಿರಾಜಮಾರ್ಗ' ಕೃತಿಯನ್ನು, ಅದೊಂದು ಮಾರ್ಗದರ್ಶಕ ಕೈಪಿಡಿಯೆಂದು ಮಾನ್ಯ ಮಾಡುತ್ತಾರೆ. ಏಕೆಂದರೆ, ನೆಬ್ರಿಜಾನ ವ್ಯಾಕರಣಗ್ರಂಥ ಮತ್ತು 'ತೊಳ್ಕಾಪ್ಪಿಯಂ' ಗ್ರಂಥಕ್ಕಿಂತ ಹೆಚ್ಚಿನ ಮಹತ್ವವನ್ನು 'ಕವಿರಾಜಮಾರ್ಗ' ಪಠ್ಯದಲ್ಲಿ ಗುರುತಿಸಿಕೊಂಡಿದ್ದಾರೆ.

'ಕವಿರಾಜಮಾರ್ಗ' ಕೃತಿಗಿಂತ ಸುಮಾರು ಆರು ಶತಮಾನಗಳ ಕಾಲ ಹಿಂದಿನವನು ನೆಬ್ರಿಜಾ. ಈತನ ಮುಖ್ಯ ಆತಂಕವೆಂದರೆ, ಭಾಷೆಯು ಕಾಲಕಾಲಕ್ಕೆ ಹಲವಾರು ರೂಪಾಂತರಗಳನ್ನು ಪಡೆದುಕೊಳ್ಳುತ್ತಿರುವುದನ್ನು ಕಂಡು ಭಿನ್ನಗೊಂಡಿದ್ದಾನೆ. ಐನೂರು ವರ್ಷಗಳ ಇತಿಹಾಸವಿರುವ ತನ್ನ ಭಾಷೆಯು ಬೇರೆ ಬೇರೆ ರೂಪಗಳಲ್ಲಿ ಪಲ್ಲಟಗೊಂಡಿರುವುದನ್ನು ಮನಗಂಡು ರಾಣಿಯ ಮುಂದೆ ತನ್ನ ಆತಂಕವನ್ನು ವ್ಯಕ್ತಪಡಿಸುತ್ತಾನೆ. ಈತನ

ಪ್ರಕಾರ ಭಾಷೆಯ ಛಿದ್ರೀಕರಣವು ಅಂತಿಮವಾಗಿ ಸಾಮ್ರಾಜ್ಯದ ಛಿದ್ರೀಕರಣವನ್ನು ಸ್ಥಾಪಿಸಿದೆ. ಭಾಷೆಗೆ ಶಾಸ್ತ್ರೀಯ ಚೌಕಟ್ಟನ್ನು ನಿರ್ಮಿಸುವುದರ ಮೂಲಕ ಭಾಷೆಯು ಎಂದೆಂದಿಗೂ ಪರಿವರ್ತನೆ ಅಥವಾ ಛಿದ್ರಗೊಳ್ಳದಂತೆ ರಾಜಪ್ರಭುತ್ವ ಮತ್ತು ಧರ್ಮಪ್ರಭುತ್ವಗಳೆರಡರ ಶಕ್ತಿಯಿಂದ 'ಏಕತ್ವ'ವನ್ನು ನಿರ್ಮಿಸಿಕೊಳ್ಳಬೇಕು ಎಂದು ನಿವೇದಿಸಿಕೊಳ್ಳುತ್ತಾನೆ. ಅಂದರೆ 'ಪ್ರಭುತ್ವ ಕೇಂದ್ರಿತ ಸಮಸ್ತ ಅಧಿಕಾರ ರಾಜಕಾರಣ'ವನ್ನು ಪ್ರಸ್ತಾಪಿಸುತ್ತಾನೆ.

ಆದರೆ 'ಕವಿರಾಜಮಾರ್ಗ'ಕ್ಕೆ ಹೀಗೆ ಭಾಷೆಯನ್ನು ಏಕರೂಪಿಯಾಗಿ ಬಲವಂತದಿಂದ ಸೃಜಿಸಿ, ರಕ್ಷಿಸಿಕೊಳಬೇಕೆಂಬ ಮನಸ್ಸಿಲ್ಲ. ಭಾಷೆಯ ವೈವಿಧ್ಯವನ್ನು ಅದು ಸ್ವೀಕರಿಸುತ್ತದೆ, ಮೆಚ್ಚಿಕೊಳ್ಳುತ್ತದೆ. ಈ ಕಾರಣದಿಂದಲೇ ಗೌಢೀ– ವೈದರ್ಭೀ ಎಂಬುದಕ್ಕೆ ಪರ್ಯಾಯವಾಗಿ ದಕ್ಷಿಣ–ಉತ್ತರ ಮಾರ್ಗಗಳ ಕಲ್ಪನೆಯನ್ನು ಸಂಸ್ಕೃತದಿಂದ ಕನ್ನಡಕ್ಕೆ ತಂದುಕೊಂಡಿತು. ಅನ್ಯದರಿಂದ ಸಿಗುವ ಉತ್ತಮಾಂಶಗಳನ್ನು ಸ್ವೀಕರಿಸಿಕೊಂಡು ಬೆಳೆಯುವ ಜಾಣತನ ರೂಢಿಸಿಕೊಂಡಿತು ಮತ್ತು ಸ್ವೋಪಜ್ಞತೆಯನ್ನು ಕಾಪಾಡಿಕೊಳ್ಳುವ ನಿಲುವಿಗೆ ಬದ್ಧವಾಯಿತು. ಅಲ್ಲದೆ ಭಾಷೆಯ ಚಲನಶೀಲತೆಗೆ ಗಮನಕೊಟ್ಟು ಕನ್ನಡದ ತಾತ್ವಿಕತೆಯನ್ನು ರೂಪಿಸಿತು. ಇಂತಹ ಪ್ರಮುಖವಾದ ಸಂಗತಿಗಳೇ ಸುಬ್ಬಣ್ಣನವರಿಗೆ ಅಪ್ಯಾಯಮಾನವಾಗಿ ಕಂಡಿವೆ.

ಸುಬ್ಬಣ್ಣನವರ ಪ್ರಕಾರ, 'ಕವಿರಾಜಮಾರ್ಗ'ದಲ್ಲಿ ಕೇಂದ್ರಿಕೃತವಾಗಿರುವ ಎರಡು ಪ್ರಮುಖ ವೈಶಿಷ್ಟ್ಯಗಳೆಂದರೆ, ಒಂದು, ಕವಿ ಮತ್ತು ರಾಜರ ಸಂಲಗ್ನದಿಂದ ರೂಪುಗೊಂಡ ಗ್ರಂಥ ಎಂಬುದು. ಎರಡು, ಇಡೀ ಭಾರತದ ರಾಜಕಾರಣಕ್ಕೆ ಅನುಕೂಲವಾಗುವಂತಹ ಭಾಷಾ ರಾಜ್ಯವೆಂಬ ಹೊಸ ಬಗೆಯ ಸೂತ್ರವನ್ನು ದಕ್ಷಿಣದಲ್ಲಿ ಅನ್ವೇಷಿಸಿಕೊಂಡಿತು ಎಂಬುದು. ಕವಿಯೂ ಮತ್ತು ರಾಜನೂ ಸೇರಿ ನಿರ್ಮಿಸಿದ ಗ್ರಂಥ (ಮಾರ್ಗ) ಎಂದು ಹೇಳಲು ಕಾರಣವೆಂದರೆ, ಕನ್ನಡದ ವಿಸ್ತಾರವಾದ ರಾಜಕಾರಣವೂ ಬೆಳವಣಿಗೆಯ ಹಂತವನ್ನು ಮುಟ್ಟಿದ್ದು ನೃಪತುಂಗನ ಕಾಲದಲ್ಲಿ, ಭಾರತೀಯ ರಾಜಕಾರಣಕ್ಕೆ 'ಭಾಷಾ ಜನಪದದ ಸಾರ್ವಭೌಮತ್ವ'ವೆಂಬ ನೂತನ ಸೂತ್ರವೊಂದನ್ನು ಶೋಧಿಸಿಕೊಟ್ಟ ಕೃತಿಯ ಕರ್ತೃವಿಗೆಷ್ಟು ಮಹತ್ವವಿದೆಯೋ ಅಷ್ಟೇ ಮಹತ್ವ ನೃಪತುಂಗನಿಗೂ ಇದೆ. ಹಾಗಾಗೆ ಈ ಗ್ರಂಥವು ಜಂಟಿಯಾಗಿ (ಕವಿ ಮತ್ತು ರಾಜ) ರಚಿಸಲ್ಪಟ್ಟಿದೆ.

ಸುಬ್ಬಣ್ಣನವರು ಹೀಗೆ ವಿಭಿನ್ನವಾಗಿ ಚಿಂತಿಸಲು ಕಾರಣರಾದ ಡಿ.ಆರ್. ನಾಗರಾಜ್‌ರವರನ್ನು ಇಲ್ಲಿ ನೆನೆಯಬೇಕು. ಡಿ.ಆರ್.ರವರು ತಮ್ಮ ಒಂದು ಭಾಷಣದಲ್ಲಿ ". . . ನನ್ನ ಪ್ರಕಾರ ಕಳೆದ ಸಾವಿರ ಎರಡು ಸಾವಿರ ವರ್ಷಗಳಲ್ಲಿ ಒಂದು ಪ್ರಪಂಚದ ಹತ್ತು ಹನ್ನೆರಡು ಅತ್ಯಂತ ಮಹತ್ವದ ರಾಜಕೀಯ ಕೃತಿಗಳ ಪಟ್ಟಿಯೊಂದನ್ನು ಮಾಡುವುದಾದಲ್ಲಿ 'ಕವಿರಾಜಮಾರ್ಗ' ನಿಸ್ಸಂದೇಹವಾಗಿ ಅದರಲ್ಲಿ ಸೇರುವಂಥದು"[*] ಎಂದು ಹೇಳುತ್ತಾರೆ. ಇದನ್ನು ಸುಬ್ಬಣ್ಣನವರು ತಮ್ಮ ಪ್ರಬಂಧದಲ್ಲಿ ಪ್ರಸ್ತಾಪಿಸುತ್ತಾರೆ.

ಸುಬ್ಬಣ್ಣನವರ ಪ್ರಕಾರ ಕವಿರಾಜಮಾರ್ಗದ ಅನನ್ಯತೆ ಇದು: "ಕವಿಕಾಯಕವು 'ಭಾವ'ದ ಸೂಕ್ಷ್ಮ ಸ್ತರಕ್ಕೆ ಸಂಬಂಧಿಸಿದ್ದು ಮತ್ತು ಪ್ರಭುತ್ವಕಾಯಕವು 'ಭವ'ದ ಮೂಲ ಸ್ತರಕ್ಕೆ ಸಂಬಂಧಿಸಿದ್ದು. ಮೊದಲು 'ಭಾವಲೋಕ'ದ ನಿರ್ಮಾಣವಾಗಿ ಅನಂತರ ಅದರ ಅಸ್ತಿವಾರ ನಕ್ಷೆಯ 'ಭವಲೋಕ'ವು ನಿರ್ಮಾಣಗೊಳ್ಳುತ್ತದೆ. ಭಾವದಲ್ಲಿ ಸ್ಫುರಿಸಿ ಭಾಷೆಯಲ್ಲಿ ನಾಮರೂಪಗಳಾಗಿ ಚಿತ್ರಗೊಳ್ಳದೆ ಯಾವುದೇ

---

* ಅದೇ, ಪು.೮೯.

ಕ್ರಿಯೆಯೂ ಘಟಿಸಲಾರದಷ್ಟೇ? ಕವಿಯೂ ರಾಜನೂ ಕೂಡಿಕೊಂಡು ಭಾವ ಕನ್ನಡ ಭವ ಕನ್ನಡಗಳ ಸಂಯುಕ್ತ ಸೃಷ್ಟಿಗೆ ಕೈಚಾಚಿರುವುದನ್ನು ದಾಖಲಿಸುವ 'ಕವಿರಾಜಮಾರ್ಗ'ವು ಆ ಕಾರಣದಿಂದ ಅಸಾಧಾರಣ ಅನನ್ಯವಾಗಿದೆ'[೬] ನೃಪತುಂಗ ರಾಜನು ಜನತೆಯ ಹಿತ, ಶ್ರೀರಕ್ಷೆ ಕೋರುತ್ತಾ ತನ್ನ ಹೆಬ್ಬೆರಳನ್ನೇ ಬಲಿಯಾಗಿ ದೇವಿಗೆ ಸಮರ್ಪಿಸಿದವನು ಇತ್ತ ಒಂದು ಭಾಷೆಯ ನಿರಂತರ ಅಭ್ಯುದಯಕ್ಕಾಗಿ, ಅದರ ಅಧಿಕೃತತೆಗಾಗಿ ಎಲ್ಲ ನೆಲೆಗಳಿಂದಲೂ ಅರಿವು, ಎಚ್ಚರದ ಮೂಲಕ ಶ್ರಮಿಸುತ್ತಿರುವ ಶ್ರೀವಿಜಯ ಒಂದು ಕಡೆ ಇದ್ದಾನೆ. ಒಟ್ಟು ಜನಪದ – ಭಾಷೆ –ರಾಜ್ಯ ಮೂರನ್ನು ಮೇಳೈಸಿಕೊಂಡು ಎಲ್ಲವುಗಳಿಗೂ 'ಕನ್ನಡ'ವೆಂಬ ಏಕರೂಪ (ಹೆಸರು)ವನ್ನು ಸ್ಥಾಪಿಸಲು ವೈದಿಕ– ಜೈನ ಧರ್ಮಗಳೆರಡೂ ಶ್ರಮಿಸುತ್ತಿವೆ ಎಂಬುದೇ ಬಹಳ ಕುತೂಹಲಕಾರಿಯಾದ ಸಂಗತಿಯಾಗಿದೆ.

'ಭವ' ಮತ್ತು 'ಭಾವ' ಭಾಷೆ (ಕವಿ) –ಪ್ರಭುತ್ವ (ರಾಜ)ಗಳೆರಡರ ಸಂಲಗ್ನದಿಂದ ಈ ಗ್ರಂಥವು ಜನ್ಮತಾಳಿದೆಯೆಂಬುದಷ್ಟೆ ಅಲ್ಲ. ಇದು ಜಗತ್ತಿನಲ್ಲಿ ಮೊದಲು ಮತ್ತು ಕೊನೆಯದು ಎಂಬುದೇ ಈ ಗ್ರಂಥದ ವೈಶಿಷ್ಟ್ಯವಾಗಿದೆ ಮತ್ತು 'ಕನ್ನಡ'ವನ್ನು ಪ್ರಮಾಣ (ಸ್ಥಿರ) ಭಾಷೆಯನ್ನಾಗಿ ರೂಪಿಸುವಲ್ಲಿ ಮಾಡಿದ ಪ್ರಯತ್ನ ಇದಾಗಿದೆಯೆಂಬುದು ಸುಬ್ಬಣ್ಣನವರ ಚಿಂತನೆಗೆ ಪ್ರಚೋದನೆಯನ್ನು ನೀಡಿದೆ. ಜನಸಮುದಾಯದ ಒಂದು ಭಾಷೆಯು ತನ್ನ ಅಸ್ಥಿತ್ವವನ್ನು ಉಳಿಸಿಕೊಳ್ಳಬೇಕಾದರೆ ಅದಕ್ಕೊಂದು ಅಧಿಕೃತತೆ ಬರಬೇಕಾಗುತ್ತದೆ. ಈ ಅಧಿಕೃತತೆಯ ಮೂಲಕ ಭಾಷೆಯು ತನ್ನ ಸಾತತ್ಯವನ್ನು ಉಳಿಸಿಕೊಳ್ಳುತ್ತದೆ. ಇದೆಲ್ಲ ಸಾಧ್ಯವಾಗುವುದು ಅದರ ವಿವೇಕ–ಉಪಾಯ, ಅರಿವು–ಎಚ್ಚರ, ಅನುಸಂಧಾನ–ತಂತ್ರ ಮೊದಲಾದವುಗಳನ್ನು ಆಯಾಯಾ ಕಾಲಘಟ್ಟಗಳಲ್ಲಿ ಅನುಸರಿಸಿಕೊಂಡು ಚಾಕಚಕ್ಯತೆಯಿಂದ ಮುನ್ನಡೆಯುವುದರಿಂದ

'ಕವಿರಾಜಮಾರ್ಗ'ವು 'ಕನ್ನಡದೊಳ್ ಭಾವಿಸಿದ' ಎಂಬುದನ್ನು ಹೇಳುತ್ತದೆ. ಚಿತ್ತವು ಸ್ಪಂದಿಸುವ ರೀತಿಯೆ ಇದಾಗಿದ್ದು, ಭಾಷೆಯ ಮೂಲಕ 'ಭಾವ'ವು ಪ್ರಕಟಗೊಳ್ಳುತ್ತದೆ. ಭಾವ–ಭಾಷೆಗಳೆರಡೂ ಕೂಡಿಕೊಂಡು, ಪ್ರಮಾಣಭಾಷೆಗೆ ಒತ್ತು ನೀಡುತ್ತಾ ಅದರ ಮೂಲಕ ಪ್ರಭುತ್ವ (ರಾಜ್ಯ) ನಿರ್ಮಿಸಬೇಕೆಂಬ ಕಳಕಳಿಯುಳ್ಳದ್ದು. ಈ ನೆಲೆಯಲ್ಲಿ ಸೃಜಿಸಿಕೊಳ್ಳಬೇಕೆಂಬ ಹಂಬಲವು ಈ ಗ್ರಂಥದ ಒಟ್ಟು ಆಶಯವೇ ಆಗಿದೆ. ಕವಿಯ ಸೂಕ್ಷ್ಮ ಮನಸ್ಸಿನ ಸ್ತರಕ್ಕೆ ಸಂಬಂಧಪಟ್ಟ 'ಭಾವ'ವು ಸುಬ್ಬಣ್ಣನವರಿಗೆ ತುಂಬ ಮಹತ್ವದ್ದಾಗಿ ಕಂಡಿದೆ. ಏಕೆಂದರೆ ಈ ಗ್ರಂಥವು ಅಲಂಕಾರ, ಕಾವ್ಯ, ಭಾಷೆ, ಜನ, ರಾಜ ಇವೆಲ್ಲಕ್ಕೂ ಆಸ್ತಿವಾರವಾಗಿ ಒಂದು ಸಮುದಾಯದ ಮನಸ್ಸನ್ನು ಸಜ್ಜುಗೊಳಿಸಲು ಮತ್ತು ಸೃಜನಶೀಲತೆಯನ್ನು ಸ್ಥಾಪಿಸುವ ಐಕ್ಯಕ ಪ್ರಯತ್ನವನ್ನು ಮಾಡುತ್ತಿರುವುದರಿಂದ ಈ ರೀತಿಯ ಕ್ರಿಯಾಶೀಲ ಮನಸ್ಸು ನೆಬ್ರಿಜಾನ ವ್ಯಾಕರಣದಲ್ಲಾಗಲಿ, 'ತೊಳ್ಕಾಪ್ಪಿಯಂ' ಗ್ರಂಥದಲ್ಲಾಗಲಿ, ಕೌಟಿಲ್ಯನು ರಚಿಸಿದ 'ಮಂತ್ರ–ಪ್ರಭು–ವೀರಶಕ್ತಿ' ಎಂಬ ಸೂತ್ರದಲ್ಲಾಗಲಿ ಮತ್ತು ದಂಡಿ–ಭಾಮಹರಲ್ಲಾಗಲಿ ಗೋಚರಿಸುವುದಿಲ್ಲ ಎಂದು ಸುಬ್ಬಣ್ಣನವರು ತಮ್ಮ ಪ್ರಬಂಧದಲ್ಲಿ ಪ್ರತಿಪಾದಿಸುತ್ತಾರೆ. ಇದು ಸುಬ್ಬಣ್ಣನವರು ವಿಶಿಷ್ಟ ಬಗೆಯಲ್ಲಿ ಚಿಂತಿಸುವ ಒಂದು ಮಾದರಿಗೆ ಉದಾಹರಣೆಯಾಗಿದೆ ಎಂದು ಯಾವುದೇ ಸಂಕೋಚವಿಲ್ಲದೆ ಹೇಳಬಹುದು.

---

೬ ಅದೇ, ಪು.೪೦.

ಸುಬ್ಬಣ್ಣನವರು 'ಕಾವೇರಿಯಿಂದಂ. . .' ಎಂಬ ಪದ್ಯವನ್ನು 'ಕವಿರಾಜಮಾರ್ಗ' ಭೂಮಿಕೆಯ ಬೀಜಮಂತ್ರವಾಗಿದೆಯೆಂದು ಅಭಿಪ್ರಾಯ ಪಡುತ್ತಾರೆ ಮತ್ತು 'ವಸುಧಾವಲಯ ವಿಲೀನ ವಿಶದ ವಿಷಯ ವಿಶೇಷಂ' ಎಂಬುದನ್ನು ವಿಭಿನ್ನ ವ್ಯಾಖ್ಯಾನ ಮೂಲಕ ವಿವರಿಸುತ್ತಾರೆ. ಜಗತ್ತಿನಲ್ಲಿ ವಿಲೀನಗೊಳ್ಳುವುದು ಮತ್ತು ಅದನ್ನು ತನ್ನಲ್ಲಿ ವಿಲೀನಗೊಳಿಸಿಕೊಳ್ಳುವ ಉಭಯಪ್ರಕ್ರಿಯೆಗಳು ಕನ್ನಡದ ಸ್ವಂತಿಕೆ ಮತ್ತು ಅದರ ವೈಶಿಷ್ಟ್ಯತೆಯಾಗಿದೆಯೆಂಬುದನ್ನು ಗ್ರಹಿಸಿಕೊಂಡಿದ್ದಾರೆ. ಈ ಗ್ರಂಥದಲ್ಲಿ 'ಸ್ವ' ಮತ್ತು 'ಅನ್ಯ' ಎಂಬ ಪರಿಕಲ್ಪನೆಯು ವಿಶ್ಲೇಷಣೆಗೊಳಪಟ್ಟಿರುವ ರೀತಿಯು ಸುಬ್ಬಣ್ಣನವರಿಗೆ ಅನುಪಮವಾಗಿ ಕಂಡಿದೆ. ಏಕೆಂದರೆ, ಸುಬ್ಬಣ್ಣನವರ ಗ್ರಹಿಕೆಯ ನೆಲೆಗಳನ್ನು ರೂಪಿಸುವಲ್ಲಿ ಈ ಗ್ರಂಥವು ಪ್ರಮುಖವಾಗಿದೆ. ಅವರೆ, ಕವಿರಾಜಮಾರ್ಗದ ಓದು ನನ್ನನ್ನು ಬಹುತೇಕ ಚಟುವಟಿಕೆಗಳಲ್ಲಿ ತಿದ್ದುತ್ತಾ ಬಂದಿದೆ ಎಂದು ಒಂದೆಡೆ ಹೇಳುತ್ತಾರೆಯೆಂಬುದನ್ನು ಮರೆಯುವಂತಿಲ್ಲ.

'ಸ್ವ' ಮತ್ತು 'ಅನ್ಯ' ಎಂಬ ಕಲ್ಪನೆಗಳನ್ನು ವಿವರವಾಗಿ ಚರ್ಚಿಸುತ್ತಾರೆ. ಈ ಗ್ರಂಥದಲ್ಲಿ 'ಸ್ವ' ಮತ್ತು 'ಅನ್ಯ' ಎಂಬುವುಗಳು ವಿಶಾಲ ಮನೋಭೂಮಿಕೆಯ ಮೇಲೆ (ಹಿನ್ನೆಲೆಯಲ್ಲಿ) ವ್ಯಾಖ್ಯಾನಿಸಲ್ಪಟ್ಟಿವೆ. ಗ್ರಂಥದಲ್ಲಿ ವ್ಯಕ್ತವಾಗಿರುವ 'ಕಸವರಮೆಂಬುದು ನೆರೆ ಸೈಸಿರುವೊಡೆ ಪರಧರ್ಮಮಂ ಪರವಿಚಾರಮುಮಂ' ಎಂಬ ಮಾತು ಇಡೀ ಕನ್ನಡ ಸಾಹಿತ್ಯಕ್ಕೆ ಮಾತ್ರವಲ್ಲ. ವಿಶ್ವಕ್ಕೆ ಧ್ಯೇಯ ವಾಕ್ಯವಿದ್ದಂತೆ. ಅನ್ಯ ವಿಚಾರಗಳನ್ನು, ಅನ್ಯಧರ್ಮಗಳನ್ನು ಸಹಿಸಿಕೊಂಡು ಜೊತೆಯಲ್ಲಿ ಬಾಳುವುದೆ ನಿಜವಾದ ಮುಕ್ತ ಮನಸ್ಸಾಗಿದೆ. ಇಂತಹ ನಿಲುವೊಂದು ಅಂದಿನಿಂದಲೂ ಉದ್ದಕ್ಕೂ ಬಾಳಿಕೊಂಡು ಬಂದಿರುವುದು 'ಕನ್ನಡ'ದ ವಿಶೇಷ ಗುಣವಾಗಿದೆ.

'ಅನ್ಯ'ವನ್ನು ಪ್ರತಿ ಎಂದು ತಿಳಿಯದೆ 'ಸಹ' ಎಂದು ಅರಿತಾಗ ಮಾತ್ರವೇ ಬೇರೆ ಧರ್ಮಗಳು, ಭಾಷೆಗಳು ಮತ್ತು ಸಂಸ್ಕೃತಿಗಳೊಂದಿಗಿನ ಗಾಢವಾದ ಸಂಬಂಧ ಮತ್ತು ಅನುಸಂಧಾನ ಸಾಧ್ಯವಾಗುತ್ತದೆ. ತಾನು ಬೆಳೆದು ಬೇರೆಯದನ್ನು ತನ್ನಲ್ಲಿ ವಿಲೀನಗೊಳಿಸಿಕೊಂಡು ಬಾಳುವ ಈ ಮನೋಧರ್ಮವನ್ನು ಸುಬ್ಬಣ್ಣನವರು 'ಕವಿರಾಜಮಾರ್ಗ'ದ ಮೂಲಕ ಗ್ರಹಿಸಿಕೊಂಡಿದ್ದಾರೆ. ಹಾಗಾಗೆ ಇದನ್ನು ತಮ್ಮ ಗ್ರಹಿಕೆಯ ನೆಲೆಯನ್ನಾಗಿಯೂ ರೂಪಿಸಿಕೊಂಡರು. ಶ್ರೇಷ್ಠತೆಯ ವ್ಯಸನವನ್ನು ವ್ಯಾಖ್ಯಾನಿಸುವ ಸಂದರ್ಭದಲ್ಲಿ 'ಸಮತ್ವ'ಕ್ಕೆ ವಿರುದ್ಧವಾದ ಶ್ರೇಷ್ಠತೆಯನ್ನು ವ್ಯಾಧಿ ಎಂದು ಪರಿಗಣಿಸುತ್ತಾರೆ ಇದನ್ನು ಮುಂದಿನ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗುತ್ತದೆ.

ಮೂಲಭೂತವಾಗಿ ಭಾಷಾರಾಜ್ಯವೆನ್ನುವ ಕಲ್ಪನೆಯೇ ಇತರ ಭಾಷೆ ಮತ್ತು ರಾಜ್ಯಗಳೊಂದ್ಗಿಎ 'ಸಹ್ಯತೆ'ಯನ್ನು ತನ್ನ ತಾತ್ವಿಕತೆಯನ್ನಾಗಿ ರೂಪಿಸಿಕೊಳ್ಳುವಂತಹುದು. ಪ್ರತಿಯೊಂದು ಜನಪದದ ಭಾಷೆ–ಸಂಸ್ಕೃತಿಯು, ಒಂದಕ್ಕಿಂತ ಒಂದು ಭಿನ್ನವಾಗಿ ಕೂಡಿರುತ್ತವೆ. ಈ ಭಿನ್ನತೆಯು ಊನವಾಗದಂತೆ ಕಾಯ್ದುಕೊಳ್ಳಬೇಕಾದರೆ, ರಾಜಕೀಯ ಸಾರ್ವಭೌಮತ್ವವು ಅವಶ್ಯಕವಾಗುತ್ತದೆ. ಈ ಸತ್ಯವನ್ನು ತಿಳಿದುಕೊಂಡೆ 'ಭಾಷಾರಾಜ್ಯವೆಂಬ' ಹೊಸ ಸೂತ್ರವೊಂದನ್ನು ಶೋಧಿಸಿಕೊಳ್ಳಲಾಯಿತು ಮತ್ತು ಈ ಭಾಷಾರಾಜ್ಯ ಸೂತ್ರಕ್ಕೆ ಸೈರಣೆ ಮತ್ತು ಸಹಬಾಳ್ವೆ ಅನಿವಾರ್ಯವಾಯಿತು. ಎಲ್ಲ ಕಾಲಕ್ಕೂ 'ಕನ್ನಡ ರಾಜ್ಯ'ಕ್ಕೆ ಭದ್ರವಾದ ಅಸ್ತಿವಾರವನ್ನು ಸ್ಥಾಪಿಸಬೇಕೆಂಬ ದೂರದರ್ಶಿತ್ವವನ್ನು ಇಟ್ಟುಕೊಂಡೆ ಈ ಬಗೆಯ ಸೂತ್ರವನ್ನು ಹೆಣೆಯಲಾಯಿತು. ಹೀಗಾಗುವುದರಿಂದ ರಾಜನ ಶೌರ್ಯತನವು ಕೇವಲ ಒಂದು ಸೀಮಿತ ವಲಯಕ್ಕಷ್ಟೇ ನಿಂತುಕೊಳ್ಳುತ್ತದೆ. ಆತ

ವ್ಯಾಪಕವಾದ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವುದರ ಮೂಲಕ, ಜನರು ಸ್ವಾತಂತ್ರ್ಯವನ್ನು ಗಳಿಸಿಕೊಳ್ಳುತ್ತಾರೆ. ಅಲ್ಲದೆ ಜನರ ಮೇಲೆ ಅನ್ಯರ ದಾಳಿಯಾಗದಂತೆ ತಡೆಯಲು ಇದು ಸಹಕಾರಿಯಾಗುತ್ತದೆ.

ಒಟ್ಟಾರೆ 'ಜನಾಧಿಕಾರದ ರಾಜಕಾರಣ'ಕ್ಕೆ ಹೊಸ ಬಗೆಯ ಭಾಷ್ಯವನ್ನು ಐತಿಹಾಸಿಕವಾಗಿ ಸ್ಥಾಪಿಸಲಾಯಿತು. ಇದು ಪ್ರಜಾಪ್ರಭುತ್ವದ ಮಾದರಿಗೆ ಹಿಡಿದ ಕೈಗನ್ನಡಿಯೂ ಹೌದು. ಭಾರತದ ಸಂವಿಧಾನದ ಪೂರ್ವಪೀಠಿಕೆಯಲ್ಲಿ ದಾಖಲಾಗಿರುವ ವಿಷಯಗಳನ್ನು ನೆನೆದರೆ, 'ಕವಿರಾಜಮಾರ್ಗ' ಗ್ರಂಥದ ಬಗ್ಗೆ ಗೌರವ ಹೆಚ್ಚಾಗುತ್ತದೆ. ಅನಂತಮೂರ್ತಿಯವರು, ಕೆ.ವಿ. ಅಕ್ಷರರವರ 'ಸಮ್ಮುಖದಲ್ಲಿ ಸ್ವಗತ' ಎಂಬ ಕೃತಿಯ ಬಗ್ಗೆ ಮಾತನಾಡುತ್ತಾ ಇಂಗ್ಲಿಷ್ ಲೇಖಕ ಇ.ಎಂ. ಫಾಸ್ಟರ್ ಹೇಳುವ 'ಓನ್ಲೀ ಕನೆಕ್ಟ್' ಬಗ್ಗೆ ಪ್ರಸ್ತಾಪಿಸುತ್ತಾರೆ. "ನಾವು ಸಂಬಂಧವಿದೆ ಎಂದು ತಿಳಿಯದೇ ಇರುವ ವಿದ್ಯಾಮಾನಗಳಲ್ಲಿ ತಟ್ಟನೆ ಒಂದು ಸಂಬಂಧವನ್ನು ಕಾಣಿಸುವುದು ಜಾಣತನ ಮಾತ್ರವಲ್ಲ' ಅದೊಂದು ನೋಡುವ ಕ್ರಮ"[೭] ಎಂದು ಹೇಳುತ್ತಾರೆ. ಇಂತಹ ಸಮರ್ಥವಾದ ಕೆಲಸವನ್ನೇ ಸುಬ್ಬಣ್ಣನವರು ಕವಿರಾಜ ಕೃತಿಯ ಮೂಲಕ ತಮ್ಮ ಪ್ರಬಂಧದಲ್ಲಿ ಮಾಡಿದ್ದಾರೆ ಎಂಬುದು ನನ್ನ ಗ್ರಹಿಕೆ.

'ಕವಿರಾಜಮಾರ್ಗ'ದಲ್ಲಿ ನೇರವಾಗಿ, ಸ್ಪಷ್ಟವಾಗಿ ಎಲ್ಲವನ್ನೂ ಹೇಳಿಕೊಂಡಿಲ್ಲ. ಸುಬ್ಬಣ್ಣನವರೆ, ಹೇಳುವ ಹಾಗೆ, ". . .ಎಲ್ಲೋ ಒಂದೆಡೆಯಲ್ಲಿ, ಉದ್ದೇಶಪೂರ್ವಕವಾದೆನಿಸದ ರೀತಿಯಲ್ಲಿ ತೇಲಿಸಿಬಿಟ್ಟಿದೆ. ಗಿಡದಲ್ಲಿ ಯಾವುದೋ ಮೂಲೆ ಟೊಂಗೆಯ ಕಾಣದ ಹೂವು ಪರಿಮಳವನ್ನು ತೇಲಿಸಿಬಿಟ್ಟ ಹಾಗೆ. ನಿಜವಾಗಿ, ಈ ಗ್ರಂಥವೇ ಅಂಥ ಸ್ವೈರಣೆಗೆ ಒಂದು ಸ್ಥಿರ ಅಕ್ಷರಸಾಕ್ಷಿಯಾಗಿ ನಿಂತಿದೆ"[೮] ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು,

ಕೃತಿಯಲ್ಲಿ ಅಂತರ್ಗತವಾಗಿ ಉದ್ದೇಶವೆನಿಸಿದ ರೀತಿಯಲ್ಲಿ ಧ್ವನಿತವಾಗುವ ಅನೇಕ ಹೊಳುಹುಗಳನ್ನು ಸುಬ್ಬಣ್ಣನವರು ಗಮನಿಸಿದ್ದಾರೆ. ಆ ಮೂಲಕ ಪಠ್ಯದ ಒಡಲಿನಿಂದ ಹೊರಡುವ ಧ್ವನಿಪೂರ್ಣ ಸೃಜನಶೀಲತೆಯನ್ನು ಹೆಕ್ಕಿ ತೆಗೆದಿದ್ದಾರೆ. ೨೧ನೆ ಶತಮಾನದಲ್ಲಿ ಸುಬ್ಬಣ್ಣನವರು ಒಂದು ಪ್ರಾಚೀನ ಕೃತಿಯನ್ನು ನಮ್ಮ ಕಾಲದ ಕೃತಿಯನ್ನಾಗಿ ಕಂಡಿರಿಸಿದ ಬಗೆಯಿದಾಗಿದೆ. ಸಮಕಾಲೀನ ಸಂದರ್ಭದಲ್ಲಿ ಆ ಕೃತಿಯ ಮೂಲಕ ಪರಿಹಾರೋಪಯಗಳನ್ನು ಕಂಡುಕೊಳ್ಳಲು ಸಾಧ್ಯವೆ ಎಂದು ನೋಡುತ್ತಿದ್ದಾರೆ. ವರ್ತಮಾನದಲ್ಲಿ ನಿಂತು ಐತಿಹಾಸಿಕವಾಗಿ (ಭೂತಕಾಲದ) ಕಾಲ, ಸಂದರ್ಭಗಳನ್ನು ಗಮನಿಸಿ ಮಾತನಾಡುತ್ತಾ ಭವಿಷತ್ ಬಗೆಗೆ ಅಪಾರ ಕಾಳಜಿಯನ್ನು ವ್ಯಕ್ತಪಡಿಸಿ ಮುನ್ನೋಟವನ್ನು ಕೊಟ್ಟದ್ದು ಸುಬ್ಬಣ್ಣನವರ ವಿಶಿಷ್ಟತೆಯೇ ಆಗಿದೆ.

ಸುಬ್ಬಣ್ಣನವರು ತಮ್ಮ ಒಳನೋಟಗಳ ಪ್ರಖರತೆಯಿಂದ ಕಂಡುಕೊಂಡ ಮತ್ತೊಂದು ಮಹತ್ವದ ವಿಷಯವೆಂದರೆ, 'ಕವಿರಾಜಮಾರ್ಗ' ಪಠ್ಯವು ಪ್ರಜಾಪ್ರಭುತ್ವಕ್ಕೆ ಕುರಿತು ಬರೆದ 'ಲಿಖಿತ ಸಂವಿಧಾನ'ವಾಗಿದೆಯೆನ್ನುವುದು ಅವರು ತಮ್ಮ ಪ್ರಬಂಧದಲ್ಲಿ ಹೇಳುವ ಈ ಮಾತುಗಳನ್ನು ಗಮನಿಸಬೇಕು.

"ಇವತ್ತಿನ ನಮ್ಮ ಭಾಷಾವಾರು ರಾಜ್ಯ-ರಾಷ್ಟ್ರ ರಾಜಕಾರಣದ ಬೀಜವು ಕವಿರಾಜಮಾರ್ಗ ಕಾಲದ ವಿಶಿಷ್ಟ ಸಂದರ್ಭದಲ್ಲಿ ಕನ್ನಡದಲ್ಲಿ ಅಂಕುರಿಸಿದ್ದು ಎನ್ನಬಹುದು. ಅಲ್ಲದೆ ಇವತ್ತಿನ ನಮ್ಮ ಜನತಂತ್ರ ಕಲ್ಪನೆಗೆ

---

೭ ಅಕ್ಷರ, ಕೆ.ವಿ., ಸಮ್ಮುಖದಲ್ಲಿ ಸ್ವಗತ, ಅಕ್ಷರ ಪ್ರಕಾಶನ, ಸಾಗರ, ೨೦೦೨, ಪು.೭

೮ ಸುಬ್ಬಣ್ಣ, ಕೆ.ವಿ., ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು, ಅಕ್ಷರ ಪ್ರಕಾಶನ, ಸಾಗರ, ೨೦೦೦, ಪು.೫೪

ಆಸ್ತಿವಾರವಾಗಬಹುದಾದ ಜನ-ಭಾಷಾ-ಪ್ರಭುತ್ವ ಸೂತ್ರವೂ ಆ ಕಾಲದಲ್ಲಿ ಒಮ್ಮೆ ಆವಿಷ್ಕೃತವಾಗಿತ್ತು ಎನ್ನುವುದೂ ನಮಗೆ ಕುತೂಹಕಲಕಾರಿಯಾಗಬೇಕು."[೯]

ಸ್ವಾತಂತ್ರ್ಯೋತ್ತರ ಭಾರತವು ಪ್ರಜಾಪ್ರಭುತ್ವ ಆಳ್ವಿಕೆಗೆ ಒಳಪಟ್ಟು ಸಂವಿಧಾನವನ್ನು ರೂಪಿಸಿಕೊಳ್ಳುವಾಗ 'ಪ್ರಸ್ತಾವನೆ'ಯನ್ನು ವಿಶಾಲವಾದ ಮುಕ್ತಮನಸ್ಸಿನ ಮನೋಭೂಮಿಕೆಯ ಮೇಲೆ ಸ್ಥಾಪಿಸಿತು. 'ಪ್ರಸ್ತಾವನೆ'ಯಲ್ಲಿ ವ್ಯಕ್ತವಾಗುವ ತಾತ್ವಿಕತೆಯನ್ನು ನೆನಪಿಸಿಕೊಂಡರೆ ಗೊತ್ತಾಗುತ್ತದೆ. ಸಹಸ್ರಮಾನ ವರ್ಷಗಳಿಂದಲೂ ಭಾರತೀಯ ಸಮುದಾಯದಲ್ಲಿ ಅವಿತುಕೊಂಡಿದ್ದ ಅಭೀಪ್ಸೆಗಳು ಗರಿಗೆದರಿದ್ದು ಸಂವಿಧಾನದ ಮೂಲಕವೆ. ಈ ಬಗೆಯ ಒಂದು ಸಂಬಂಧವು ಗೊತ್ತಿದ್ದೋ, ಗೊತ್ತಿಲ್ಲದೆಯೋ 'ಕವಿರಾಜಮಾರ್ಗ'ದ ಮೂಲಕ ತಳುಕು ಹಾಕಿಕೊಂಡಿದೆಯೆನ್ನುವುದೆ ಗಮನಾರ್ಹ.

೨೦ನೇ ಶತಮಾನದಲ್ಲಿ ಬ್ರಿಟಿಷರು ಭಾರತವನ್ನು ಬಿಟ್ಟು ಹೋದ ಬಳಿಕ 'ಭಾಷಾವಾರು ರಾಜ್ಯಗಳ ವಿಂಗಡಣೆ'ಯನ್ನು ಮಾಡಿಕೊಳ್ಳಲಾಯಿತು. ಒಕ್ಕೂಟ ಭಾರತದ ಕಲ್ಪನೆಯ ಬೀಜವನ್ನು ಮೊದಲಿಗೆ ನೆಟ್ಟದ್ದು 'ಕವಿರಾಜಮಾರ್ಗ'ವೇ ಎಂಬ ಅಪರೂಪವಾದ ಒಳನೋಟವನ್ನು ಸುಬ್ಬಣ್ಣನವರು ಕಂಡುಕೊಳ್ಳುತ್ತಾರೆ ಮತ್ತು ಈ ಪಠ್ಯವು ರಾಜ್ಯ-ರಾಷ್ಟ್ರ ರಾಜಕಾರಣದ ಪೂರ್ವಪೀಠಿಕೆಯನ್ನು ಆಗಲೇ ಬರೆದುಕೊಂಡಿತ್ತು ಎಂಬ ಮತ್ತೊಂದು ಸಂಗತಿಯನ್ನು ಹೆಕ್ಕಿ ತೆಗೆಯುತ್ತಾರೆ. ಹೊಸ ಓದಿಗೆ ಅನುವು ಮಾಡಿಕೊಡುವ ಸುಬ್ಬಣ್ಣನವರ ಈ ಬಗೆಯ ವೈವಿಷ್ಟ್ಯತೆಯೇ ಬೇರೆಯವರಿಗಿಂತ ಭಿನ್ನವಾಗಿ ನಿಲ್ಲಲು ಸಾಧ್ಯವಾಗಿದೆ.

೯೦ರ ದಶಕದಲ್ಲಿ 'ಕವಿರಾಜಮಾರ್ಗ' ಕೃತಿಯನ್ನು ಮತ್ತೊಮ್ಮೆ ಓದಿಕೊಂಡಾಗ ತಮ್ಮ ಚಿಂತನೆಯು ಪ್ರಸ್ತುತದೊಳಗೆ ಗಾಢವಾದುದರ ಕುರಿತು ಸುಬ್ಬಣ್ಣನವರು ಸ್ಮರಿಸಿಕೊಳ್ಳುತ್ತಾರೆ. ಕರ್ನಾಟಕದ ಏಕೀಕರಣ ಚಳುವಳಿ, ಗೋಕಾಕ್ ಚಳುವಳಿ, ಕಾವೇರಿ ಚಳುವಳಿ ಮತ್ತು ರಾಜ್ಯ ಹಾಗೂ ರಾಷ್ಟ್ರಕ್ಕೆ ಸಂಬಂಧಿಸಿದಂತೆ ಗಡಿವಿವಾದ ಸಮಸ್ಯೆಗಳು ಇನ್ನಿತರ ಅನೇಕ ಕಿರುಚಳುವಳಿಗಳನ್ನು ಕುರಿತು 'ಕವಿರಾಜಮಾರ್ಗ' ಗ್ರಂಥದ ದುರ್ಬೀನಿನಲ್ಲಿಟ್ಟು ಚಿಂತಿಸುತ್ತಾರೆ.

ಚಳುವಳಿಗಳ ಆರಂಭದಲಿದ್ದ ಬಿರುಸು ನಂತರ ಟೊಳ್ಳುಗೊಂಡಿದ್ದನ್ನು ಡಿ.ಆರ್. ನಾಗರಾಜ್‌ರವರ ಬರವಣಿಗೆಯ ಮೂಲಕ ಮನದಟ್ಟು ಮಾಡಿಕೊಳ್ಳುತ್ತಾರೆ. ಕೆ.ವಿ. ಅಕ್ಷರವರರು 'ನೀರಿನಲ್ಲಿ ಕರಗಿದ ರಾಷ್ಟ್ರೀಯತೆ' ಎಂಬ ಲೇಖನದಲ್ಲಿ ಕಾವೇರಿ ಚಳುವಳಿಯು ಬೆಳಕಿಗಿಂತ, ಬೆಂಕಿಯನ್ನು ಉಗುಳಿತ್ತಿದೆ ಎಂಬ ಆತಂಕವನ್ನು ವ್ಯಕ್ತಪಡಿಸುತ್ತಾರೆ. ಜನಸಮುದಾಯದ ಉನ್ಮಾದದಲ್ಲಿ ಈ ಸಮಸ್ಯೆಯು ಕಗ್ಗಂಟಾಗಿದೆ ಎಂದು ಅವರು ಹೇಳುತ್ತಾರೆಯಲ್ಲದೆ, ಕುದುರೆ ಮುಖ್ಯ ಗಣಿಗಾರಿಕೆ, ಕೈಗಾರಿಕಾ ಅಣುಘಟಕಗಳು ಮತ್ತು ರೈತರ ಭವಿಷ್ಯದ ಮೇಲೆ ಭಯಾನಕ ಪರಿಣಾಮ ಬೀರುವ ತಳಿತಂತ್ರಜ್ಞಾನಗಳ ವಿರುದ್ಧ ಚಳುವಳಿ ಬಿರುಸುಗೊಳ್ಳದಿರಲು ಕಾರಣವೇನು? ಎಂಬುದರ ಕುರಿತು ಪ್ರಶ್ನೆಗಳನ್ನು ಹಾಕಿಕೊಳ್ಳುತ್ತಾರೆ.

ಕೆ.ವಿ. ಅಕ್ಷರರವರ ಮೇಲಿನ ಮಾತುಗಳನ್ನು ಉಲೇಖಿಸಲು ಕಾರಣವಿದೆ. ನಮ್ಮ ಕಾಲದ ಸಂದರ್ಭದಲ್ಲಿ ನಡೆದ ಅಥವಾ ನಡೆಯುತ್ತಿರುವ ಚಳುವಳಿಗಳ ತೀವ್ರತೆ, ಆತಂಕ 'ಕವಿರಾಜಮಾರ್ಗ'ದ ಸಂದರ್ಭದಲ್ಲೂ ಇತ್ತು ಅಥವಾ ನಮ್ಮ ಕಾಲಕ್ಕಿಂತಲೂ ಹೆಚ್ಚಿನ ಆತಂಕ ಮತ್ತು ತೀವ್ರತೆಯಿತ್ತು ಎಂದೆ

---

೯ ಅದೇ, ಪು.೯೫.

ಹೇಳಬಹುದು. ಸುಬ್ಬಣ್ಣನವರೆ, "ಕವಿರಾಜಮಾರ್ಗ'ದ ಸಂದರ್ಭವು ಈ ಎರಡೂ ಸಂದರ್ಭಗಳಿಗಿಂತ ಎಷ್ಟೋ ಪಾಲು ಹೆಚ್ಚು ತೀವ್ರ ಆತಂಕಗಳಿಂದ್ದ ಕಾಲವಾಗಿತ್ತು ಎಂಬುದು ಮತ್ತು ಅಂಥ ಕಾಲದಲ್ಲಿನ ಆ ಗ್ರಂಥದ ವಿವೇಕವು ಮೇಲಿನ ಎರಡೂ ಕಾಲದಲ್ಲಿಯೂ ಕಾಣದ ಅಪರೂಪವಾದ ವಿವೇಕವಾಗಿತ್ತು"[೧೦] ಎಂದಿದ್ದಾರೆ.

ಸುಬ್ಬಣ್ಣನವರು ಪಠ್ಯದೊಡಲಿನಲ್ಲಿ ಗರ್ಭೀಕರಿಸಿಕೊಂಡಿರುವುದನ್ನು ತಮ್ಮ ಸೂಕ್ಷ್ಮಗಣ್ಣಿನಿಂದ ಹೊರಕ್ಕೆಳೆದು 'ಭವ'ದ ಬೆಳಕಿಗೆ ತಂದು ಎಲೆ–ಎಳೆಯಾಗಿ ಬಿಚ್ಚಿಟ್ಟಿದ್ದಾರೆ ಪಠ್ಯದ ಆಂತರ್ಯದ ಧ್ವನಿಗಳನ್ನು, ಪ್ರಸ್ತುತ ಕಾಲದ ಆಂತರ್ಯದ ಧ್ವನಿಗಳಿಗೆ ಮುಖಾಮುಖಿಯಾಗಿಸುತ್ತಾರೆ. ಒಂದು ಸೃಜನಶೀಲ ಓದಿನ ಮಾದರಿ ಯಾವ ಬಗೆಯದಾಗಿರುತ್ತದೆ ಎಂಬುದನ್ನು ನಾವು ಸುಬ್ಬಣ್ಣನವರ ಮೂಲಕ ಅರಿತುಕೊಳ್ಳಬಹುದು. ಯಾವುದೇ ಕಾಲದ ಒಂದು ಮಹತ್ವವಾದ ಸೃಜನಶೀಲ ಕೃತಿಯನ್ನು ಸಾರ್ವಕಾಲಿಕ ಕೃತಿಯನ್ನಾಗಿ ಅಧ್ಯಯನ ಮಾಡುವ ಕ್ರಮವೂ ಇದಾಗಿದೆ.

ಸುಬ್ಬಣ್ಣನವರಿಗೆ 'ಕವಿರಜಮಾರ್ಗ'ವು ಅತ್ಯತ ಅಪ್ಯಾಯಮಾನವೆನಿಸಲು, ಆಪ್ತವಾಗಲು ಕಾರಣವೇನೆಂದು ಹುಡುಕಹೊರಟರೆ, ಅವರೆ ಒಂದೆಡೆ ಹೇಳಿಕೊಂಡ ಈ ಕೆಳಗಿನ ಮಾತುಗಳು ನೆನಪಿಗೆ ಬರುತ್ತವೆ.

"ವೈಯಕ್ತಿಕವಾಗಿ ಹೇಳುವುದಾದರೆ ಕಳೆದ ಹತ್ತಾರು ವರ್ಷಗಳಲ್ಲಿ 'ಕವಿರಾಜಮಾರ್ಗ'ದ ಓದು ನನ್ನ ಬಹುತೇಕ ಚಟುವಟಿಕೆಗಳನ್ನು ತಿದ್ದುತ ಬಂದಿದೆ ಮತ್ತು ನನ್ನ ಚಟುವಟಿಕೆಗಳು ಈ ಗ್ರಂಥದ ನನ್ನ ಓದನ್ನು ತಿದ್ದುತ್ತ ಬಂದಿವೆ. ಹೀಗೆ ಈ ಗ್ರಂಥವು ಬರಿಯ ಪಠ್ಯವಾಗಿ ಉಳಿಯದೆ ಸತತ ಪ್ರಕ್ರಿಯೆಯಲ್ಲಿ ನನ್ನ ಸಹಭಾಗಿಯಾಗಿ ಒಡಗೂಡಿಕೊಂಡಿದೆ."[೧೧]

ಸುಬ್ಬಣ್ಣನವರು ಪ್ರತಿ ಮರು ಓದಿನಲ್ಲೂ ಒಂದೊಂದು ಬಗೆಯ ಹೊಸ ಒಳನೋಟಗಳನ್ನು ಕಂಡುಕೊಂಡಿದ್ದಾರೆ ಮತ್ತು ತಮ್ಮ ಗ್ರಹಿಕೆಯ ನೆಲೆಗಳನ್ನು ವಿಸ್ತರಿಸಿಕೊಂಡಿದ್ದಾರೆ. ಒಂದು ಕೃತಿಯೊಂದಿಗಿನ ನಿರಂತರ ಅನುಸಂಧಾನ, ನೇರ ಮಾತುಕತೆ ಮತ್ತು ಮುಖಾಮುಖಿಯ ಮೂಲಕ ತಮ್ಮ ಬಹುತೇಕ ಚಟುವಟಿಕೆಗಳನ್ನು ಪರಿಷ್ಕೃತಗೊಳಿಸಿಕೊಂಡಿದ್ದಾರೆ. ಇದು ಅವರ ಬರವಣಿಗೆಯ ತಾತ್ವಿಕ ನಿಲುವುಗಳನ್ನು ರೂಪಿಸುತ್ತಾ ಬಂದಿದೆ. ಈ ಮಾತನ್ನು ಒಟ್ಟು ಅವರ ಸಾಂಸ್ಕೃತಿಕ (ನೀನಾಸಂ ಇತ್ಯಾದಿ) ಚಟುವಟಿಕೆಗಳಿಗೆ ಅನ್ವಯಿಸಿ ನೋಡಬಹುದು. 'ಕಾಳಿದಾಸ ಸನ್ಮಾನ : ಪ್ರತಿಸ್ಪಂದನ' ಎಂಬ ಭಾಷಣ ಲೇಖನದಲ್ಲಿ 'ಕವಿರಾಜಮಾರ್ಗ'ದ ತಾತ್ವಿಕ ನಿಲುವುಗಳು ಮತ್ತು ಅಲ್ಲಿನ ಚಿಂತನೆಗಳನ್ನು ಕಾಣಬಹುದು.

". . .ನಮ್ಮ ಅಸ್ತಿತ್ವದ ವೈವಿಧ್ಯ ಮತ್ತು ಏಕತೆಗಳೆರಡನ್ನು ಏಕಕಾಲಕ್ಕೆ ಸರಿಸಮನಾಗಿ ಪರಿಭಾವಿಸುವ ಮನೋಧರ್ಮವೇ ನಮ್ಮ ಪ್ರಜಾತಂತ್ರದ ಮೂಲ ಅಸ್ತಿವಾರ ಎಂಬುದು ನನ್ನ ನಂಬಿದೆ"[೧೨] ಎಂದು ಹೇಳಿಕೊಳ್ಳುತ್ತಾರೆ.

---

೧೦ ಅಕ್ಷರ, ಕೆ.ವಿ., ಸಮ್ಮುಖದಲ್ಲಿ ಸ್ವಗತ, ಅಕ್ಷರ ಪ್ರಕಾಶನ, ಸಾಗರ, ೨೦೦೨, ಪು.೯೯.

೧೧ ಸುಬ್ಬಣ್ಣ, ಕೆ.ವಿ., ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು, ಅಕ್ಷರ ಪ್ರಕಾಶನ, ಸಾಗರ, ೨೦೦೦, ಪು.೧೦೨.

೧೨ ಸುಬ್ಬಣ್ಣ, ಕೆ.ವಿ., ಲೇಖನ ಸಂಕಲನ ೧೯೫೪–೨೦೦೪; ಅರೆಶತಮಾನದ ಅಲೆ ಬರಹಗಳು, ಸಂಪಾದನೆ: ಟಿ.ಪಿ. ಅಶೋಕ, ಅಕ್ಷರ ಪ್ರಕಾಶನ, ಸಾಗರ, ೨೦೦೪, ಪು.೨೪೩.

ಹಾಗೆಯೇ ಈ ಲೇಖನದ ಕೊನೆಯ ಪ್ಯಾರವನ್ನು ಒಟ್ಟಿಗೆ ಓದಿಕೊಳ್ಳಬೇಕು. "ನೀನಾಸಮ್‌ನ್ನು 'ನಾಟಕವೇ ಮುಂತಾದ ಕೆಲವು ವಿಶಿಷ್ಟ ಚಟುವಟಿಕೆಗಳನ್ನು ನಡೆಸುತ್ತಿರುವ ಒಂದು ನಿಶ್ಚಿತ ಸ್ವರೂಪದ ಸಂಸ್ಥೆ' ಅಂತ ಭಾವಿಸಿದಾಗ ಇದು ಬೇರೆ ಕಡೆಗಳಲ್ಲಿ ಸಾಧ್ಯವಾಗದಿರುವ ಒಂದು ವಿಶಿಷ್ಟ ಸಾಧನೆ ಎನಿಸಬಹುದು"[೧೩] ಎನ್ನುತ್ತಾ, ನೀನಾಸಮ್‌ನ್ನು ಆ ರೀತಿ ಗ್ರಹಿಸಬಾರದು ಎಂದು ವಿನಂತಿಸಿಕೊಳ್ಳುತ್ತಾ ಮುಂದುವರಿದು, "ನೀನಾಸಮ್ ಎಂಬುದು ನಿಜವಾಗಿ, ಸದ್ಯ ನಮ್ಮ ರಾಜ್ಯದಲ್ಲೇ ನಡೆದಿರುವ ಅನೇಕಾನೇಕ ಗ್ರಾಮೀಣ ಸಾಂಸ್ಕೃತಿಕ ಚಟುವಟಿಕೆಗಳ ಹಾಗೂ ನಮ್ಮಲ್ಲಿನ ಪರಿಸರ –ದಲಿತ–ರೈತ–ಮಹಿಳಾ ಇತ್ಯಾದಿ ಕಿರುಚಳುವಳಿಗಳ ಬಲು ಸಣ್ಣ ಅಭಿವ್ಯಕ್ತಿ ಅಂತ ಭಾವಿಸಬೇಕು; ನೀನಾಸಮ್‌ನ್ನು 'ಒಂದು ಆದರ್ಶ ಕನಸಿನ ಸಾಧನೆಯ ಪರಿ' ಎನ್ನುವಂತೆ ನೋಡದೆ, ಇವತ್ತಿನ ಕನ್ನಡ –ಭಾರತಗಳ ಆಂತರಿಕ ಕುರಿತವು ಹೊರಗಾಣಿಸಿರುವ ಒಂದು ಕಿರು–ಕಿರು–ಕಿರು ಅಭಿವ್ಯಕ್ತಿ ಅಂತ ನೋಡಬೇಕು; ಅದು ನಮ್ಮ ಆಸೆ" ಎಂದು ತಮ್ಮ ಮನದಿಂಗಿತವನ್ನು ವ್ಯಕ್ತಪಡಿಸುತ್ತಾರೆ.

ನೀನಾಸಮ್‌ನ ತಾತ್ವಿಕತೆಯನ್ನು ಕುರಿತು ಇಷ್ಟು ದೀರ್ಘವಾಗಿ ಸುಬ್ಬಣ್ಣನವರ ಮಾತುಗಳನ್ನು ಉಲ್ಲೇಖಿಸುವುದಕ್ಕೆ ಒಂದು ಕಾರಣವಿದೆ. ನೀನಾಸಮ್ ಕನ್ನಡ ಸಂಸ್ಕೃತಿಯನ್ನು ವೃದ್ಧಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ. ಭಾಷೆಯನ್ನು ಬೆಳೆಸುವಲ್ಲಿಯೂ ತನ್ನ ಕಾಣಿಕೆಯನ್ನು ಕೊಟ್ಟಿದೆ. ಫಿಲ್ಮ್ ಸೊಸೈಟಿ ಎಂಬುದಕ್ಕೆ 'ಚಿತ್ರ ಸಮಾಜ'ವೆಂಬ ದೇಶೀ ಭಾಷೆಯ ಹೆಸರು ಶೋಧಿಸಿಕೊಂಡಿತ್ತು. ಇದು ಭಾಷೆಯ ಅರ್ಥಸಾಧ್ಯತೆಗಳನ್ನು ವಿಸ್ತರಿಸಿಕೊಳ್ಳುವ ಕ್ರಮವಾಗಿದೆ. ಒಟ್ಟಾರೆ ನೀನಾಸಮ್ ಸಮುದಾಯದ ಭಾಗವಾಗಿಯೇ ತನ್ನ ಕಾರ್ಯವನ್ನು ನಿರ್ವಹಿಸಿದೆ ಎಂಬುದನ್ನು ಇಲ್ಲಿ ನೆನೆಯಬೇಕು.

ಸುಬ್ಬಣ್ಣನವರ ಸಾಂಸ್ಕೃತಿಕ ಚಟುವಟಿಕೆಗಳ ಅಸ್ತಿವಾರವು ರೂಪುಗೊಂಡಿರುವುದೆ 'ಕವಿರಾಜಮಾರ್ಗ'ದ ತಾತ್ವಿಕ ಬುನಾದಿಯ ಮೇಲೆನಿಸುತ್ತದೆ. ಏಕೆಂದರೆ, 'ತಾನು' ಮತ್ತು 'ಅನ್ಯ' ಹಾಗೂ 'ಶ್ರೇಷ್ಠತೆ' ಮುಂತಾದ ಪರಿಕಲ್ಪನೆಗಳನ್ನು ಅವರು ವ್ಯಾಖ್ಯಾನಿಸುವಾಗ 'ಕವಿರಾಜಮಾರ್ಗ'ದ ವಿವೇಕವನ್ನು ಸ್ಮೃತಿಗೆ ತಂದುಕೊಂಡಿತು. ಈ ಮೂಲಕ ತಮ್ಮ ವಿವೇಕವನ್ನು ನಿಕಷನಗೊಳಿಸಿಕೊಂಡು ಚಿಂತಿಸುತ್ತಾರೆ ಎಂಬುದು ನನ್ನ ಗ್ರಹಿಕೆ.

**ಕೆರೆಗೆಹಾರ ಮತ್ತು ಗೋವಿನಹಾಡು :**

'ಗೋವಿನಹಾಡು' ಮತ್ತು 'ಕೆರೆಗೆ ಹಾರ' ಎಂಬೆರೆಡು ಜಾನಪದ ಕಿರುಕಥನಗಳು ಸುಬ್ಬಣ್ಣನವರ ಹೊಸ ಓದಿನ ಕೀಲಿಕೈಗಳಾಗಿವೆ. ಭಾಷೆಯ ಬಗೆಗೆ ಚಿಂತಿಸುವ ಸಂದರ್ಭದಲ್ಲಿ ಸ್ಥಳೀಯತೆಗೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಾರೆ. ಪಾಶ್ಚಾತ್ಯ ವಿಮರ್ಶಾ ಪ್ರಸ್ಥಾನಗಳಿಂದ ಎರವಲು ತಂದ ಮಾನದಂಡಗಳಿಗೆ ಅವರು ಹೆಚ್ಚು ಮಾನ್ಯತೆ ಕೊಡುವುದಿಲ್ಲ. ಅವರ ಪ್ರಕಾರ ಆ ಮಾನದಂಡಗಳು ಪೂರ್ವಗ್ರಹೀತದಿಂದ ಕೂಡಿರುವುದರಿಂದ, ದೇಶೀಯತೆಯ ಕುರಿತು ಚಿಂತಿಸುವ ಸಂದರ್ಭದಲ್ಲಿ ಹೊಸ ಒಳನೋಟಗಳನ್ನು ಹೊಳೆಯಿಸಿಕೊಡುವುದಿಲ್ಲ. ಈ ಕಾರಣಕ್ಕಾಗಿ ಅವರು, "ಸಾಹಿತ್ಯ–ಸಹೃದಯತೆಗಳ ಬಗ್ಗೆ ಈ ಶತಮಾನದಲ್ಲಿ ನಾವು ತೀರ ಹೊಸತೇ ಆದ ಕಲ್ಪನೆಗಳನ್ನು ರೂಢಿಸಿಕೊಂಡಿದ್ದೇವಲ್ಲ, ಆ ಹಿನ್ನೆಲೆಯಲ್ಲಿ 'ಗೋವಿನಹಾಡು'ದಿಂದ

---

[೧೩] ಅದೇ, ಪು.೨೪೪

ಕವಿತೆಯನ್ನು ಅರಗಿಸಿಕೊಳ್ಳುವುದು ಕಷ್ಟವಾಗುತ್ತದೆ"[೧೪] ಎಂದು ಅಭಿಪ್ರಾಯಪಡುತ್ತಾರೆ. ಅವರ 'ಆಧುನಿಕ ಕನ್ನಡ ಸಾಹಿತ್ಯಕ್ಕೆ ಹೀಗೆ ಬನ್ನಿ' ಎಂಬ ಲೇಖನವು ಸಹ ಈ ಬಗೆಯ ನಿಲುವನ್ನೇ ಕುರಿತಂಥದ್ದು.

'ಕವಿರಾಜಮಾರ್ಗ' ಗ್ರಂಥವನ್ನು ಅಲಂಕಾರಗ್ರಂಥ ಮತ್ತು ಅನುವಾದಗ್ರಂಥ ಎಂದು ಹೇಗೆ ತಿಳಿದುಕೊಳ್ಳಲಾಗಿತ್ತೋ ಹಾಗೆಯೇ 'ಗೋವಿನ ಹಾಡು' ಸಹ ಅದೊಂದು ನೀತಿಕಥೆ, ಸಂದೇಶವುಳ್ಳದ್ದು ಮುಂತಾಗಿ ಗ್ರಹಿಸಿಕೊಳ್ಳಲಾಗಿತ್ತು. ಅಂತಹ ಸಂದರ್ಭದಲ್ಲಿ ನಮ್ಮದೇ ಆದ ವಿಮರ್ಶಾ ಮಾನದಂಡಗಳಿಂದ ದೇಸೀ ಸಾಹಿತ್ಯಕ್ಕೆ ಹೊಸ ಸ್ಪರ್ಶ ಕೊಟ್ಟು ಎಲ್ಲೋ ಮರೆಯಲ್ಲಿ ಹುದುಗಿರುವ ವಿಚಾರಧಾರೆಗಳು ಪ್ರಖರಗೊಳ್ಳುವಂತೆ ಮಾಡಿದರು. 'ಗೋವಿನ ಹಾಡು' ಮತ್ತು 'ಕೆರೆಗೆ ಹಾರ' ಎಂಬೆರಡು ಜಾನಪದ ಕಿರುಕಥನಗಳನ್ನು ಈ ಹಿನ್ನೆಲೆಯಲ್ಲಿ ನೋಡಿದ್ದಾರೆ.

ಸುಬ್ಬಣ್ಣನವರಿಗೆ 'ಗೋವಿನ ಹಾಡು' ನೀತಿ ಸಂದೇಶವೂ ಅಲ್ಲ ಅಥವಾ ಮಕ್ಕಳ ಪದ್ಯವೂ ಅಲ್ಲ' ಬದಲಾಗಿ ಅಲ್ಲೊಂದು 'ಜನಪದರ ತತ್ತ್ವ' ಉಸಿರಾಡುತ್ತಿದೆ. ಈ ಜನಪದ ತತ್ತ್ವವು ಯಾಂತ್ರಿಕ ಮಾನದಂಡಗಳಿಂದ ರೂಪುಗೊಂಡಿದ್ದಲ್ಲ; ಅನುಭವದ ಬಸಿರಿನಿಂದ ಹುಟ್ಟಿಕೊಂಡದ್ದು. ಹೀಗೆ ಅನುಭವದಿಂದ ಬೆಳಕಿಗೆ ಬಂದದ್ದು ನಮ್ಮದಕ್ಕೆ ಒಗ್ಗಿಕೊಳ್ಳುವಂಥದ್ದು ಮತ್ತು ಆತ್ಮಪ್ರಶಂಸೆಯುಳ್ಳದ್ದು. ಇಂತಹ ಸತ್ತ್ವವೇ ಭಾಷೆಯ ನಿರಂತರತೆಯನ್ನು ಜೀವಂತಗೊಳಿಸುತ್ತದೆ ಎಂಬ ಸತ್ಯವನ್ನು ಅವರು ದೃಢವಾಗಿ ನಂಬಿಕೊಂಡಂತಿದೆ.

'ಸತ್ಯವೇ ನಮ್ಮ ತಂದೆ-ತಾಯಿ' ಇದು ಗೋವಿನ ಹಾಡಿನ ತತ್ವವಾಗಿದೆ. ಸುಬ್ಬಣ್ಣನವರು ಹಿಂಸೆ, ಪಾಪ, ಕ್ರೌರ್ಯಗಳನ್ನು ಹೊಸ ವಿಧಾನದಲ್ಲಿ ನಿರೂಪಿಸುತ್ತಾರೆ. ಕೇಡು, ಹಿಂಸೆ- ಮುಂತಾದ್ದನ್ನು 'ಕಪ್ಪೆ ಅರಭಟ್ಟ' ಶಾಸನದಿಂದ ಹಿಡಿದು, ಜನಾಂಗ-ಧರ್ಮಗಳ ಚಿಂತಕರು, ಜೈನಕಾವ್ಯದಲ್ಲಿ ಭವಾವಳಿಗಳು ಮತ್ತು ಕುವೆಂಪುವಿನ ರಾವಣನ ತನಕವೂ ಇವೆಲ್ಲವೂ ಭಾರತೀಯ ಕಾವ್ಯಗಳಲ್ಲಿ ಹೇಗೆ ನಿರೂಪಿಸಲ್ಪಟ್ಟಿವೆ ಎಂಬುದನ್ನು ಪ್ರಸ್ತಾಪಿಸುತ್ತಾ ಹೋಗುತ್ತಾರೆ. ಹಿಂಸೆ, ಪಾಪಗಳನ್ನು ಹಿಂಸೆಯಿಂದ ಜಯಿಸುವ ಬದಲು, ಅಹಿಂಸೆಯಿಂದ ಜಯಿಸುವ ಮಾನವಕುಲದ ಬಗೆಗೆ ಮಾತನಾಡುತ್ತಾರೆ. ಜಾಗತೀಕರಣದಂತಹ ಕ್ಲಿಷ್ಟ ಕಾಲದಲ್ಲಿ (ಕೇಡು) ಸ್ಥಳೀಯ ಭಾಷೆಗಳೆಲ್ಲ ಬಾಳಿತೆ? ಎಂಬ ಪ್ರಶ್ನೆ ಏಳುತ್ತದೆ. ಜಾಗತೀಕರಣವೆನ್ನುವುದು ಕೇಡು, ಹಿಂಸೆಯನ್ನು ಹೊತ್ತುಕೊಂಡ ವ್ಯಾಘ್ರರೂಪವಾಗಿದೆ. ಆ ವ್ಯಾಘ್ರ ರೂಪಕದ ಮುಂದೆ, ವಿಭಿನ್ನ ಸಂಸ್ಕೃತಿಗಳಿಂದ ಮೈದಾಳಿರುವ ಗೋವುಗಳು (ಭಾಷೆಗಳು) ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಆದೀತೆ? ಎಂಬ ಸಂದೇಹ ಮೂಡುತ್ತದೆ. ಆ ವ್ಯಾಘ್ರಕ್ಕೆ ತಮ್ಮ ಕೇಡು, ಹಿಂಸೆಯ ಬಗೆಗೆ ವಿವೇಕಮುಕ್ತವಾದ ಪ್ರಜ್ಞೆ ಮೂಡುವುದು ಯಾವಾಗ?

"ಕನ್ನಡವನ್ನು ಉಳಿಸುವುದಲ್ಲ ಆದರೆ ಮಡಿಲೊಳಗೆ ನಮ್ಮನ್ನು ಬಾಳಿಸಿಕೊಳ್ಳುವುದು ಮತ್ತು ಅದನ್ನು ನಮ್ಮ ಪುಷ್ಟಿಗಾಗಿ ಬಳಸಿಕೊಳ್ಳುವುದು. ಇವೇ ನಮ್ಮ ಅಪೇಕ್ಷೆ ಕರ್ತವ್ಯಗಳಾಗಬೇಕು"[೧೫] ಎಂಬ ಮಾತುಗಳನ್ನು ಸುಬ್ಬಣ್ಣನವರು ಹೇಳುತ್ತಾರೆ. 'ಕವಿರಾಜಮಾರ್ಗ'ವು 'ಕನ್ನಡದೊಳ್ ಭಾವಿಸಿದ ಜನಪದ ಎನ್ನುತ್ತದೆ ನಮ್ಮ

---

[೧೪] ಸುಬ್ಬಣ್ಣ, ಕೆ.ವಿ., ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು, ಅಕ್ಷರ ಪ್ರಕಾಶನ, ಸಾಗರ, ೨೦೦೨, ಪು.೧೧೧.

[೧೫] ಅದೇ, ಪು.೧೦೧.

ಜನಪದವು. ಕರ್ನಾಟಕ ಪ್ರದೇಶದಲ್ಲಿ ಭವಿಸಿದ್ದು ಮತ್ತು ಕನ್ನಡತ್ವದಲ್ಲಿ ಭಾವಿಸಿದ್ದು ಎಂಬ ಹೆಮ್ಮೆಯಿಂದಲೇ ಸಂಘರ್ಷದ ಮಾರ್ಗವನ್ನು ತ್ಯಜಿಸಿ, ಅನುಸಂಧಾನದ ಮಾರ್ಗಗಳನ್ನು ತನ್ನ ತಾತ್ತ್ವಿಕ ನಿಲುವನ್ನಾಗಿ ರೂಪಿಸಿಕೊಂಡಿತು. ಕನ್ನಡವೆನ್ನುವುದು, ಭಾವ ಜಗತ್ತಾದುದರಿಂದ ಅದಕ್ಕೆ ಬಿರುಕೆಂಬುದಿಲ್ಲ. 'ಕನ್ನಡವೆಂಬುದು ಪೌರುಷದ ಹೋರಾಟವಲ್ಲ' ಎಂಬ ಮಾತನ್ನು ಸುಬ್ಬಣ್ಣನವರು ಹೇಳುತ್ತಾರೆ. ಗೋವಿನದು ಪೌರುಷ ಹೋರಾಟವಲ್ಲ; ಸತ್ಯ ಮತ್ತು ಅನುಸಂಧಾನದ ಒಲವಿನ ಹೋರಾಟ ಎಂಬುದನ್ನು 'ಕವಿರಾಜಮಾರ್ಗ'ದಿಂದ ಹಿಡಿದು ಆಧುನಿಕ ಲೇಖಕರಾದ ಕುವೆಂಪು, ಬೇಂದ್ರೆ, ಕಾರಂತ, ಮಾಸ್ತಿ ಮತ್ತು ಅಡಿಗ ಮುಂತಾದವರವರೆಗೆ ನೋಡಬಹುದು. ಇವೆಲ್ಲಾ ಸರಿ, ಒತ್ತಟ್ಟಿಗಿರಲಿ. ೨೦ನೇ ಶತಮಾನದ ಅದ್ಭುತ ಸಾಂಸ್ಕೃತಿಕ ಚಿಂತಕರಾದ ರಾಮಮನೋಹರ ಲೋಹಿಯಾರವರು ತಮ್ಮ 'ಇಂಗ್ಲಿಷ್ ತೊಲಗಿಸಿ' ಎಂಬ ಲೇಖನದಲ್ಲಿ, "ನನಗೆ ಎಷ್ಟೋ ಸಲ ಅನಿಸುತ್ತದೆ. ಪ್ರಾಯಶಃ ನಿಮಗೂ ಹಾಗೆ ಅನ್ನಿಸಿರಬಹುದು – ನಮ್ಮದೇ ಈ ದೇಶದಲ್ಲಿ ಯಾವನೋ ಅತಿಕ್ರಮಣಕಾರಿಯು ಬಂದು ಆಕ್ರಮಿಸಿ, ನಮ್ಮನ್ನು ನಿಮ್ಮ ಹೊಲ ಮನೆಗಳಿಂದ ಹೊರಹಾಕಿದ್ದಾನೆ ಹಾಗೂ ಅಲ್ಲಿನ ನಿಜ ಹಿಡುವಳಿದಾರರಾದ ನಾವು ಹೊರನಿಂತು ಹತಾಶೆಯಲ್ಲಿ ನಿಸ್ಸಹಾಯಕರಾಗಿ ಕೈ ತಿರುಪಿ ಕೊಳ್ಳುತ್ತಿದ್ದೇವೆ ಎಂತ"[೧೬] ಎಂದು ಹೇಳುತ್ತಾರೆ.

ಜಾಗತೀಕರಣದ ಹಿನ್ನೆಲೆಯಲ್ಲಿ ಭಾಷಾ ಸಮಸ್ಯೆಗಳನ್ನು ಕುರಿತು ಚಿಂತಿಸುವ ಲೋಹಿಯಾರವರ ಈ ಮಾತುಗಳನ್ನು ಅವಶ್ಯ ಗಮನಿಸಬೇಕಾಗುತ್ತದೆ. ಜಾಗತೀಕರಣವೆಂಬುದು ಅದೊಂದು ಏಕಭಾಷೆ, ಏಕಮಂತ್ರವುಳ್ಳದ್ದು. ಹೀಗಿರುವಾಗ ಬಲಿಷ್ಠ ಇಚ್ಛಾಶಕ್ತಿಗಳು ಕೇಂದ್ರಿಕರಣವನ್ನು ಜಗತ್ತಿನ ನೆಲೆಗೆ ವಿಸ್ತರಿಸಿಕೊಂಡಿವೆ. ಇಡೀ ವಿಶ್ವವನ್ನು ಒಂದು ಮಾರುಕಟ್ಟೆಯನ್ನಾಗಿ ಸೃಷ್ಟಿಸಿದೆ. ಹೇಗೆಂದರೆ, ನಮ್ಮದೆ ನೀರನ್ನು ಬಾಟಲಿಗೆ ಹಾಕಿ ಬಿಕರಿ ಮಾಡುವ ಮಟ್ಟಕ್ಕೆ ತಲುಪಿಬಿಟ್ಟಿದೆ. ಎಲ್ಲವೂ ಖಾಸಗೀಕರಣವಾಗುತ್ತಿರುವ ಭರಾಟೆಯಲ್ಲಿ, ಸಂಪತ್ತೆಲ್ಲ ಅಭಿವೃದ್ಧಿಯ ನೆಪದಲ್ಲಿ ಸುಲಿಗೆಯಾಗುತ್ತಿದೆ ಮತ್ತು ಹಗಲು ದರೋಡೆಗೆ ಅನುವು ಮಾಡಿಕೊಡುತ್ತಿದೆ.

ಇದು ಕೇವಲ ಕನ್ನಡ ಭಾಷೆಯ ಸಮಸ್ಯೆ ಮಾತ್ರವಲ್ಲ, ಇನ್ನುಳಿದ ಅನೇಕ ನೆರೆಹೊರೆಯ ಭಾಷೆಗಳಿವೆ. ಇಂಗ್ಲಿಷ್ ಅರ್ಥಾತ್ ಜಾಗತೀಕರಣ ತನ್ನ ಬಿಗಿ ಮುಷ್ಠಿಯಲ್ಲಿ ಹಿಡಿದುಕೊಳ್ಳಲು ಹೊಂಚು ಹಾಕುತ್ತಿದೆ. ನಿಜಕ್ಕೂ ಇದರೊಂದಿಗೆ ಯಾವ ರೀತಿಯ ಅನುಸಂಧಾನ ಸಾಧ್ಯ? ಮತ್ತು ಹೇಗೆ? ಎಂಬುದೆ ನಮ್ಮ ಮುಂದಿರುವ ದೊಡ್ಡ ಸವಾಲು, ಐ.ಟಿ. ಬಿ.ಟಿ. ಸೆಂಟರ್‌ಗಳು ವಿಸ್ತರಿಸಿಕೊಳ್ಳುತ್ತಿರುವ ಈ ಹೊತ್ತಿನಲ್ಲಿ ಮಾತೃಭಾಷೆಯನ್ನು ತಮ್ಮ ಜೀವನದ ಅವಿಭಾಜ್ಯ ಅಂಗವೆಂಬಂತೆ ನೋಡಲಾಗುತ್ತಿಲ್ಲ. ಬದಲಾಗಿ ಇಂಗ್ಲಿಷ್‌ನ್ನು ಅಪ್ಪಿಕೊಳ್ಳಲಾಗುತ್ತಿದೆ. ಈ ಐ.ಟಿ. ಬಿ.ಟಿ.ಗಳು ವಿಲಾಸಿ ಜೀವನದ ಆಮಿಷವೊಡ್ಡಿ ಯುವಶಕ್ತಿಯನ್ನು ಸೆಳೆದುಕೊಳ್ಳುತ್ತಿವೆ. ಹೀಗೆ ಆಮಿಷಕ್ಕೆ ಬಲಿಬಿದ್ದ ಯುವಶಕ್ತಿಯ ಜೀವನ ಯಾಂತ್ರಿಕವಾಗಿದೆಯೆನ್ನುವುದು ಬೇರೆ ಮಾತು.

ಈವೊತ್ತು ಎಂತಹ ಅಸಹ್ಯ ಪರಿಸ್ಥಿತಿ ನಿರ್ಮಾಣವಾಗಿ ಬಿಟ್ಟಿದೆಯೆಂದರೆ, ಮನೆಯಲ್ಲಿ, ಬೀದಿಯಲ್ಲಿ ತಮ್ಮ ಮಾತೃಭಾಷೆಯನ್ನು ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಳ್ಳುವುದಕ್ಕೆ ಹಿಂಜರಿಯುವ ಜನರಿದ್ದಾರೆ.

---

೧೬ ಸುಬ್ಬಣ್ಣ, ಕೆ.ವಿ., ಭಾಷೆ ಮತ್ತು ಇತಿಹಾಸ, ರಾಮಮನೋಹರ ಲೋಹಿಯಾ ಬರಹಗಳು, ಸಂಪುಟ–ಮೂರು, ಸಂಪಾದಕರು– ಪ್ರೊ. ಕಾಳೇಗೌಡ ನಾಗವಾರ, ಡಾ. ನಟರಾಜ್ ಹುಳಿಯಾರ್, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮, ಪು.೧೨.

ಅಷ್ಟೇ ಏಕೆ ಕೆಲವು ತಾಯ್ತಂದೆಯರು ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸುವ ಮುನ್ನವೆ ಇಂಗ್ಲಿಷ್‌ನ್ನು ಅವರ ಜೀವನದ ಅವಿಭಾಜ್ಯ ಅಂಗವೆಂಬಂತೆ ರೂಪಿಸಲು ಪಣತೊಟ್ಟವರಂತೆ ವರ್ತಿಸುತ್ತಾರೆ. ಈ ಸಂದರ್ಭದಲ್ಲಿ ಹಳ್ಳಿಯವರನ್ನು ನೆನೆದಾಗ ಮಾತ್ರ ಅವರ ಬಗ್ಗೆ ಕೃತಾರ್ಥಭಾವ ಮೂಡುತ್ತದೆ. ಆದರೆ ಈ ಕೃತಾರ್ಥಭಾವ ಮುಂದೆಯೂ ಉಳಿಯುತ್ತದೆ ಎಂದು ಧೈರ್ಯವಾಗಿ ಹೇಳಲು ಮನಸ್ಸಾಗುತ್ತಿಲ್ಲ.

'ಕವಿರಾಜಮಾರ್ಗ' ಪಠ್ಯದ ಮೂಲಕ ಸುಬ್ಬಣ್ಣನವರು ಅರ್ಥೈಸುವ ವಿಚಾರಕ್ಕೂ ನಮ್ಮ ಸಂದರ್ಭದಲ್ಲಿ ನಿಂತು ವಾಸ್ತವಿಕವಾಗಿ ಆಲೋಚಿಸಿದಾಗ 'ಭಾವಿತ'ವಾದದ್ದು ಎಂಬುದರ ಬಗೆಗೆ ಅಪಕಲ್ಪನೆ ಮೂಡಿ ಬಿಡುತ್ತದೆ. 'ಜನಭಾಷೆ ಮತ್ತು ಪಾಳೆಗಾರಿ ಭಾಷೆಗಳ ಮುಖಾಮುಖಿ' ಎಂಬ ಲೇಖನದಲ್ಲಿ ಲೋಹಿಯಾರ ಈ ಮಾತುಗಳು ಇಲ್ಲಿ ಉಲ್ಲೇಖರ್ಹವಾಗಿವೆ.

"ಎಲ್ಲಕ್ಕಿಂತ ಕೆಟ್ಟದ್ದೆಂದರೆ, ಇಂಗ್ಲಿಷ್ ಭಾಷೆಯು ಭಾರತೀಯ ಪ್ರಜೆಗಳನ್ನು ಕೀಳರಿಮೆಯುಳ್ಳವರನ್ನಾಗಿ ಮಾಡಿಬಿಟ್ಟಿದೆ. ಇಂಗ್ಲಿಷ್ ಗೊತ್ತಿಲ್ಲದಿದ್ದರೆ ಯಾವುದೇ ಬಗೆಯ ಸಾರ್ವಜನಿಕ ಕೆಲಸಕ್ಕೂ ತಾವು ಅರ್ಹರಲ್ಲವೆಂದು ಅವರು ಭಾವಿಸಿಕೊಳ್ಳುತ್ತಾರೆ ಮತ್ತು ಅದರಿಂದ ದೂರ ಉಳಿಯುತ್ತಾರೆ. ಜನರು ಹೀಗೆ ಸಾರ್ವಜನಿಕ ಕ್ಷೇತ್ರದಿಂದ ದೂರವುಳಿದುಕೊಳ್ಳುವುದರಿಂದಲೇ ನಿಶ್ಚಿತವಾಗಿ ಆ ಕಾರಣದಿಂದಾಗಿಯೇ ಕಿರುಗುಂಪಿನ ಅಥವಾ ಪಾಳೆಗಾರಿಕೆಯ ಆಡಳಿತಕ್ಕೆ ಅಸ್ತಿವಾರವೊದಗುತ್ತದೆ. ಕೇವಲ ಬಂದೂಕಿನ ಮೂಲಕವೆ ಜನರನ್ನು ಹತ್ತಿಕ್ಕುವುದಲ್ಲ. ತಿಳಿಯದಿರುವ ಭಾಷೆಯೊಂದನ್ನು ಬಳಸುವ ಮೂಲಕ ಅವರನ್ನು ಮತ್ತು ಯಶಸ್ವಿಯಾಗಿ ಕೆಳತಳ್ಳಲಾಗುತ್ತದೆ. . ."[೧೭] ಅಂದರೆ ಜಾಗತೀಕರಣವು ಬೇರೆ ಬೇರೆ ರೀತಿಯ ಮುಖವಾಡಗಳನ್ನು ತೊಟ್ಟು ಯಾವ ರೀತಿ ಶೋಷಣೆಯ ಅಸ್ತ್ರವಾಗುತ್ತದೆ ಎಂಬುದನ್ನು ವಿವರಿಸುತ್ತಾ ಮುಂದುವರಿದು, "ವಿದೇಶಿ ಭಾಷೆಗಳಿಗೆ ಪರಂಪರಾಗತವಾಗಿ ಗುಲಾಮರಾಗಿ ಬಂದಿರುವವರ ಜೊತೆಯಲ್ಲಿ ಜನಸಾಮಾನ್ಯರು ನಿಂತು ಸ್ಪರ್ಧಿಸುವುದು ಸಾಧ್ಯವಿಲ್ಲ"[೧೮] ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಇಂಗ್ಲಿಷಿನ ಉಚ್ಚಾಟನೆಯ ಕುರಿತು ನಾನಿಲ್ಲಿ ಮಾತನಾಡುತ್ತಿಲ್ಲ. ನಮಗೆ ಇಂಗ್ಲಿಷ್ ಭಾಷೆ ಬೇಕು. ಆದರೆ ಯಾವ ರೀತಿಯಲ್ಲಿ ಬೇಕು ಎಂಬುದಕ್ಕೆ ಕುವೆಂಪುರವರಲ್ಲಿ ಉತ್ತರವಿದೆ. 'ನಮಗೆ ಬೇಕಾಗಿರುವ ಇಂಗ್ಲಿಷ್' ಎಂಬ ಲೇಖನದಲ್ಲಿ "ಇನ್ನು ಮುಂದೆ ಅನೇಕರಿಗೆ ಬೇಕಾದ ಇಂಗ್ಲಿಷಿನ ಮಟ್ಟವೆಂದರೆ ಅದನ್ನೋದಿ ಅರ್ಥಮಾಡಿಕೊಳ್ಳುವಷ್ಟೇ ಹೊರತು ಅದರಲ್ಲಿ ಸಂಭಾಷಿಸುವುದಾಗಲಿ, ಭಾಷಣ ಮಾಡುವುದಾಗಲಿ, ಬರೆಯುವುದಾಗಲಿ ಅಲ್ಲ"[೧೯] ಎಂದು ಹೇಳುತ್ತಾರೆ. ಕುವೆಂಪುರವರು ೧೯೬೦ರ ದಶಕದಲ್ಲಿ ಹೇಳಿದ ಮಾತಿದು. ಆದರೆ ಈವೊತ್ತು ಎಲ್ಲರೂ ಕಲಿಯುವ ಭಾಷೆಯನ್ನಾಗಿ ಮಾಡಲಾಗುತ್ತಿದೆ ಅಥವಾ ಅಂತಹ ವಾತಾವರಣವನ್ನು ಸೃಷ್ಟಿಸಲಾಗುತ್ತಿದೆ.

ಇಲ್ಲಿ ಇನ್ನೊಂದು ಬಹುಮುಖ್ಯ ಮಾತೊಂದನ್ನು ಹೇಳಬೇಕಿದೆ. ಇಂದು ನಗರಾಭಿಮುಖ ಚಲನೆಗೆ ಯುವಶಕ್ತಿ ಹಪಹಪಿಸುತ್ತಿದೆ. ವಿದ್ಯಾಭ್ಯಾಸದ ಸಲುವಾಗಿ ನಗರಕ್ಕೆ ಧಾವಿಸುವ ಯುವಪೀಳಿಗೆ, ವಿದ್ಯಾಭ್ಯಾಸದ

---

೧೭ ಅದೇ, ಪು.೯೭.

೧೮ ಅದೇ, ಪು.೯೮.

೧೯ ಕುವೆಂಪು, ಸಮಗ್ರ ಗದ್ಯ ಸಂಪುಟ–೨, ಸಂಪಾದಕ: ಡಾ. ಕೆ.ಸಿ. ಶಿವಾರೆಡ್ಡಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.೧೯೬.

ನಂತರ ನಗರದ ಆಕರ್ಷಣೆಗೊಳಗಾಗಿ ಅಲ್ಲೇ ತಮ್ಮ ವಾಸ್ತವ್ಯ ಹೂಡುತ್ತಾರೆ. ತಮ್ಮ ಸ್ಥಳೀಯ ಜಗತ್ತನ್ನು ಮರೆತು ನಗರಕ್ಕೆ ತಮ್ಮನ್ನು ಒಡ್ಡಿಕೊಳ್ಳುವ ಈ ಪ್ರಕ್ರಿಯೆಯು ಭಾಷೆಯ ಮೇಲೆ ಪರಿಣಾಮ ಬೀರುತ್ತದೆ. ಹಳ್ಳಿಯ ಉದ್ಧಾರಕ್ಕೆ ಮುಡುಪಾಗಿಡಬೇಕಾದ ತನ್ನ ಜ್ಞಾನವು 'ಸ್ವಹಿತಾಸಕ್ತಿ' ಜೀವನಕ್ಕೆ ಪೋಲಾಗುತ್ತದೆ. ಮುಂದಿನ ಪೀಳಿಗೆಗೆ ಭಾಷೆಯನ್ನು ಕೊಂಡೊಯ್ಯಬೇಕಾದ ಜನಾಂಗವೇ ಹೀಗಾಗುವುದು ದುರಂತವೆನಿಸುತ್ತದೆ.

ಸುಬ್ಬಣ್ಣನವರ ಜೀವನವು ಹಳ್ಳಿಗೆ ಮೀಸಲಾಯಿತು. ವಿದ್ಯಾಭ್ಯಾಸದ ನಂತರ ಹೆಗ್ಗೋಡಿನ ತಮ್ಮ ಹಳ್ಳಿಯಲ್ಲಿ ನೆಲೆಸಿ ಜಾಗತೀಕರಣವನ್ನು ಎದುರಿಸಿದರೆನಿಸುತ್ತದೆ. ತಮ್ಮ ಇಡೀ ಪ್ರಬಂಧವನ್ನು 'ಕವಿರಾಜಮಾರ್ಗ ಸಂಕೀರ್ತನ' ಎಂದು ಕರೆದುಕೊಂಡದ್ದು ಪ್ರಾಚೀನ ಕೃತಿಯೊಂದರ ವೈಭವೀಕರಣವಲ್ಲ, ಬದಲಾಗಿ ಅವರ ಸೃಜನಶೀಲ ವ್ಯಕ್ತಿತ್ವದ ಭಾಗವಾಗಿ ನೋಡಬೇಕಾಗುತ್ತದೆ. ವಿಚಾರವಂತರು, ಕವಿಗಳಾದ ಕೆ.ಎಚ್. ಶ್ರೀನಿವಾಸ್‌ರವರು 'ದೇಸಿಪ್ರತಿಭೆಗೆ ಸಂದ ಮನ್ನಣೆ' ಎಂಬ ಲೇಖನದಲ್ಲಿ "ಕನ್ನಡ ಮಾಧ್ಯಮದ ಬಗ್ಗೆ ಅಬ್ಬರತಾಳದಲ್ಲಿ ಕುಣಿದು ತಮ್ಮ ಮಕ್ಕಳು, ಮೊಮ್ಮಕ್ಕಳನ್ನು ಆಂಗ್ಲಮಾಧ್ಯಮಶಾಲೆಗಳಿಗೆ ದೂಡಿ, ವಿದೇಶಗಳಿಗೆ ರಫ್ತು ಮಾಡುವ ಜನರ ವಿರುದ್ಧ, ಆಗಾಗ ಟೀಕೆ, ಟಿಪ್ಪಣಿಗಳು, ಕೂಗಗಳೇವುದನ್ನು ನಾವು ಕೇಳುತ್ತೇವೆ. ಆದರೆ ಸುಬ್ಬಣ್ಣ 'ಗೋಕುಲ ನಿರ್ಗಮನ'ದಲ್ಲಿ ವ್ಯಕ್ತಪಡಿಸಿರುವ ತವಕ ತಲ್ಲಣಗಳಿಗೆ ಸ್ವತಃ ಎಷ್ಟೊಂದು ನಿಷ್ಠವಾಗಿಯೇ ಉಳಿದಿದ್ದಾನೆಂಬುದಕ್ಕೆ ಮಗನನ್ನಷ್ಟೇ ಅಲ್ಲದೆ ಮೊಮ್ಮಗನನ್ನೂ ತನ್ನ ಕನಸಿನಲ್ಲಿ ಈಗಾಗಲೇ ಅವನು ತೊಡಗಿಸಿಕೊಂಡಿರುವುದು ಜೀವಂತ ಸಾಕ್ಷಿಯಾಗಿದೆ"[೨೦] ಎಂದು ಹೇಳುತ್ತಾರೆ.

ಸುಬ್ಬಣ್ಣನವರು ಒಂದು ಸಂಸ್ಕೃತಿಯ ಬೆಳವಣಿಗೆಗೆ ಎಷ್ಟರಮಟ್ಟಿಗೆ ನಿಷ್ಠೆ, ಶ್ರದ್ಧೆಯಿಂದ ಕೂಡಿದ್ದರು ಮತ್ತು ತನ್ನ ಮಗ, ಮೊಮ್ಮಗನನ್ನು ಎಚ್ಚರಿಕೆಯಿಂದ ಜೋಪಾನವಾಗಿ ತನ್ನ ನೆಲದಲ್ಲೇ ಅಜೀವ ವಾಸ್ತವ್ಯ ಹೂಡುವಂತೆ ಮಾಡಿದ್ದನ್ನು ಹೇಳಲು ಈ ಮೇಲಿನ ಮಾತುಗಳನ್ನು ಉದ್ಧರಿಸಬೇಕಾಯಿತು.

ಒಟ್ಟಾರೆ, 'ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು' ಇಡೀ ಸಂಸ್ಕೃತಿಯನ್ನು ಕುರಿತಂತೆ ಅನೇಕ ಒಳನೋಟಗಳನ್ನು ಕೊಟ್ಟಿದೆ. ಮತ್ತು ಹೊಸ ಓದಿಗೆ ಅನುವು ಮಾಡಿಕೊಟ್ಟಿದೆ. ಒಂದು ಪ್ರಾಚೀನ ಕೃತಿಯನ್ನು ಆಯಾಯ ಕಾಲಘಟ್ಟಗಳ ಸಮಸ್ಯೆಗೆ ಮುಖಾಮುಖಿಯಾಗಿಟ್ಟು ನೋಡುವ ಒಂದು ಕ್ರಮವನ್ನು ಹೇಳಿಕೊಟ್ಟದ್ದೇ ಸುಬ್ಬಣ್ಣನವರ ಹೆಚ್ಚುಗಾರಿಕೆಯಾಗಿದೆ.

---

[೨೦] ರಂಗಧಾಮ, ಶ್ರೀ ಕೆ.ವಿ. ಸುಬ್ಬಣ್ಣ ಅಭಿನಂದನಗ್ರಂಥ, ಸಂಪಾದಕ: ಟಿ. ಮಹಾಬಲೇಶ್ವರ ಭಟ್ಟ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೫, ಪು.೧೧೯

ಅಧ್ಯಾಯ–೨

# ಸಾಹಿತ್ಯ ಗ್ರಹಿಕೆಯ ಕುರಿತು ಸುಬ್ಬಣ್ಣನವರ ಆಲೋಚನೆಗಳು ಹಾಗೂ ಶ್ರೇಷ್ಠತೆಯ ವ್ಯಸನ ಮತ್ತು ನೀನಾಸಂ, ಸ್ಥಳೀಯತೆ ಹಾಗೂ ಅಕ್ಷರ ಪ್ರಕಾಶನ

ಅಧ್ಯಾಯ-೨

# ಸಾಹಿತ್ಯ ಗ್ರಹಿಕೆಯ ಕುರಿತು ಸುಬ್ಬಣ್ಣನವರ ಆಲೋಚನೆಗಳು ಹಾಗೂ ಶ್ರೇಷ್ಠತೆಯ ವ್ಯಸನ ಮತ್ತು ನೀನಾಸಂ, ಸ್ಥಳೀಯತೆ ಹಾಗೂ ಅಕ್ಷರ ಪ್ರಕಾಶನ

**ಸಾಹಿತ್ಯ ಗ್ರಹಿಕೆ :**

ಸುಬ್ಬಣ್ಣನವರು 'ಆಧುನಿಕ ಕನ್ನಡ ಸಾಹಿತ್ಯಕ್ಕೆ ಹೀಗೆ ಬನ್ನಿ' ಎಂಬ ಲೇಖನದಲ್ಲಿ ಹೀಗೆ ಹೇಳಿಕೊಳ್ಳುತ್ತಾರೆ.

"ದಿನನಿತ್ಯದ ಭಾಷೆಗಿಂತ ಸಾಹಿತ್ಯದ ಭಾಷೆಯು ಹೆಚ್ಚು ವ್ಯಾಪಕವಾದ್ದು. ಹೆಚ್ಚು ಸಂಕೀರ್ಣವಾದ್ದು, ಹೆಚ್ಚು ಪರಿಣಾಮಕಾರಿ. ಕಲಾ ಅಭಿವ್ಯಕ್ತಿಗಳೆಲ್ಲವೂ ಹಾಗೆ-ವ್ಯಾವಹಾರಿಕ ಅಭಿವ್ಯಕ್ತಿಗಳಿಗಿಂತ ಹೆಚ್ಚು ಹೆಚ್ಚು ಆಳವಾದ ಅರಿವನ್ನು ಹುಟ್ಟಿಸಿಕೊಡುವಂಥವು. ಆದ್ದರಿಂದ ಸಾಹಿತ್ಯ, ಕಲೆ ನನಗೆ ಮತ್ತೂ ಹೆಚ್ಚಿನ ಅಗತ್ಯ."[೧]

"ವಿಮರ್ಶೆಯೆನ್ನುವುದು, ಚಹರೆಯಿಲ್ಲದ ಬಟಾಬಯಲಿನಲ್ಲಿ ಚತುರ ಚೆಂಡಾಟ ನಡೆಸುವ ಥರದ್ದಾದರೆ ಅದರಲ್ಲಿ ನನಗೆ ಆಸಕ್ತಿ ಹುಟ್ಟುವುದಿಲ್ಲ. . ."[೨]

"ಒಟ್ಟಿನಲ್ಲಿ ನಿತ್ಯ ಹಗಲು ನಾವು ನಡೆದಾಡುವ ಬೀದಿಯನ್ನೂ ಬದುಕನ್ನು ಮರೆತು ಸಾಹಿತ್ಯವೊಂದೇ ಜಗತ್ತು ಅನ್ನುವ ಹಾಗೆ, ಸೆಮಿನಾರ್ ಕೋಣೆಯ ನಿರ್ವಾತ ವಿಸ್ಮೃತಿಯಲ್ಲಿ ನಿದ್ದೆ ನಡೆದಾಟದ ಥರಾ ನಡೆವ ಚರ್ಚೆಗಳು ನನ್ನಲ್ಲಿ ವಿಚಿತ್ರ ಭಯ ಹುಟ್ಟಿಸುತ್ತವೆ."[೩]

ಸುಬ್ಬಣ್ಣನವರು, ತಾವು ಸಾಹಿತ್ಯವನ್ನು ಮತ್ತು ಸಾಹಿತ್ಯ ವಿಮರ್ಶೆಯನ್ನು ಗ್ರಹಿಸಿಕೊಂಡ ನೆಲೆಗಳ ಕುರಿತ ಹೇಳಿಕೊಂಡ ಮೇಲಿನ ಮಾತುಗಳು, ಅವರು ಆಲೊಚಿಸುವ ಭಿನ್ನತೆಯನ್ನು ನಮಗೆ ತಿಳಿಸಿಕೊಡುತ್ತದೆ.

ಒಂದು ಕೃತಿಯನ್ನು ಆಧುನಿಕ ಸಂದರ್ಭದಲ್ಲಿ ಹೇಗೆ ಓದಬಹುದು ಎಂಬುವ ಕ್ರಮದ ಬಗ್ಗೆ ತಿಳಿಸುತ್ತಾರೆ. ಪ್ರತಿ ಮರು ಓದಿನಲ್ಲೂ ಕೃತಿಯನ್ನು ಜೀವಂತಗೊಳಿಸಿಕೊಂಡು, ಹೊಸ ಓದಿಗೆ ರಹದಾರಿಯನ್ನು ಶೋಧಿಸಿಕೊಳ್ಳುವ ಬಗೆಯನ್ನು ತಿಳಿಸಿಕೊಡುತ್ತಾರೆ. ಅಂದರೆ ಒಂದು ಕೃತಿಯ ಬಗೆಗೆ ಇನ್ನಾವುದೇ ರೀತಿಯ ಹೊಸ ಚಿಂತನೆ ಸಾಧ್ಯವಿಲ್ಲ ಎಂಬ ಸಂದರ್ಭದಲ್ಲಿ ಪರ್ಯಾಯ ದಾರಿಗಳನ್ನು ತೋರಿಸಿಬಿಡುವುದು ಅವರ ಗ್ರಹಿಕೆಯ ನೆಲೆಗಳ ಒಟ್ಟು ಸ್ವರೂಪವೇ ಆಗಿದೆ. ಒಂದು ಕೃತಿಯ ಮೌಲ್ಯಮಾಪನ ಸಂದರ್ಭದಲ್ಲಿ ಬಳಸುವ

---

೧ ಸುಬ್ಬಣ್ಣ, ಕೆ.ವಿ., ಲೇಖನ ಸಂಕಲನ ೧೯೫೪-೨೦೦೪, ಅರೆಶತಮಾನದ ಅಲೆಬರಹಗಳು, ಸಂಪಾದನೆ: ಟಿ.ಪಿ. ಅಶೋಕ, ಅಕ್ಷರ ಪ್ರಕಾಶನ, ಸಾಗರ, ೨೦೦೪, ಪು.೨೯೮.

೨ ಅದೇ, ಪು.೨೯೮.

೩ ಅದೇ, ಪು.೨೯೯.

ಸಿದ್ಧಮಾನದಂಡಗಳ ಬಗ್ಗೆ ಅವರಿಗೆ ಆಸಕ್ತಿ ಇದ್ದಂತಿಲ್ಲ. ಈ ಹಿನ್ನೆಲೆಯಲ್ಲಿ 'ಪಂಪನ ಕವಿತೆ: ಅನುಸಂಧಾನಕ್ಕೆ ಮಾರ್ಗ' ಎಂಬಲ್ಲಿಂದ ಪ್ರಾರಂಭಿಸಬಹುದು.

ಪಂಪನ ಬಗೆಗಿದ್ದ ಜಡ ವಿಮರ್ಶಾ ಪರಿಕಲ್ಪನೆಯನ್ನು ಒಡೆದು, ಹೊಸದಾಗಿ ಅಧ್ಯಯನ ಮಾಡುತ್ತಾ ಮುಳಿಯತಿಮ್ಮಪ್ಪಯನವರ ಹಿನ್ನೆಲೆಯಲ್ಲಿ ಪಂಪನನ್ನು ಕುರಿತ ವಿಚಾರವಿದೆ. ಪಂಪನನ್ನು ಪಾಶ್ಚಾತ್ಯ ಉಪಕ್ರಮಗಳು ಹಾಗೂ ಸಂಸ್ಕೃತಮಾರ್ಗಗಳ ಮೂಲಕವೇ ಮಾತ್ರ ನೋಡಿದ್ದನ್ನು ವಿಮರ್ಶಿಸುತ್ತಾ ಒಂದು ಮಹಾಕಾವ್ಯವನ್ನು ಸಂಸ್ಕೃತಿಯ ನೆಲೆಯ ಕ್ರಮದಲ್ಲಿಟ್ಟು ನೋಡುತ್ತಾರೆ. ಅಂದರೆ ಕೇವಲ ಸಾಹಿತ್ಯಕವಾಗಿ ಮಾತ್ರವೇ ನೋಡಿದ್ದ ಹಿಂದಿನ ವಿಮರ್ಶಕರ ಮಿತಿಗಳನ್ನು ಗುರುತಿಸುತ್ತಾರೆ. ಮುಳಿಯತಿಮ್ಮಪ್ಪಯ್ಯನವರ ದೃಷ್ಟಿಕೋನವನ್ನಿಟ್ಟುಕೊಂಡು ಪುನರ್‌ಮೌಲ್ಯ ಮಾಪನ ಮಾಡುತ್ತಾರೆ.

ಪಂಪನು 'ವಿಕ್ರಮಾರ್ಜುನ ವಿಜಯ' ಕೃತಿಯಲ್ಲಿ ನಿರ್ವಹಿಸಿದ ತಂತ್ರದ ಬಗ್ಗೆ ವಿಮರ್ಶಕರಿಗೆ ಗೊಂದಲವಿತ್ತು ಮತ್ತು ಅದು ಅನುವಾದ ಎಂದು ಗ್ರಹಿಸಿಕೊಂಡಾಗಲು, ಆ ವಿದ್ವಾಂಸರೇಕೆ ಪಂಪನ ಮಹೋನ್ನತಿಯನ್ನು ಕೊಂಡಾಡಿದರು, ಇವತ್ತಿನ ತನಕವೂ ಮುಂತಾದ ಪ್ರಶ್ನೆಗಳನ್ನು ಕೇಳಿಕೊಳ್ಳುತ್ತಾ ತಮ್ಮ ವಿಚಾರಲಹರಿಯನ್ನು ಸುಬ್ಬಣ್ಣನವರು ತೇಲಿಬಿಡುತ್ತಾರೆ. ಅವರು ವಿಮರ್ಶಕರಲ್ಲಿ ಕಂಡುಕೊಂಡ ಮಿತಿ ಇದು :

"ಅಂದವಾದ ವರ್ಣನೆ ಸೊಗಸಾದ ಸೂಕ್ತಿಗಳು ಇವುಗಳನ್ನು ಕೇವಲವಾಗಿ ಕೊಂಡಾಡಿ ಕೊಂಡಾಡಿ ನಮ್ಮ ವಿಮರ್ಶಕರು ಕೆಲವು ಸಲ, ಪಂಪನ ಕಾವ್ಯವೆಂದರೆ ಬಣ್ಣ ಬಣ್ಣದ ಅಸಂಖ್ಯಾತ ಬಟ್ಟೆ ಚೂರುಗಳನ್ನು ಕೂಡಿಸಿ ಹೊಲಿದು ತಯಾರಿಸಿದ ಕೌದಿಯಥರದ್ದು ಎಂಬ ಭಾವನೆಯನ್ನು ಹುಟ್ಟಿಸುತ್ತಾರೆ."[೯]

ಒಂದು ಕಾವ್ಯದ ಒಟ್ಟಂದದಲ್ಲಿ ಹೊರಡುವ ಪ್ರಬಂಧಧ್ವನಿಯನ್ನು ಗ್ರಹಿಸದೆ ಹೋದ ವಿಮರ್ಶಕರ ಮಿತಿಗಳನ್ನು ಗುರುತಿಸುತ್ತಾ, ಪಾಶ್ಚಾತ್ಯ ವಿಮರ್ಶಾ ಮಾನದಂಡಗಳ ಗುಂಗಿನಲ್ಲಿ ಮೈಮರೆತದ್ದಕ್ಕೆ ವಿಷಾದವನ್ನು ವ್ಯಕ್ತಪಡಿಸುತ್ತಾರೆ. ವಿಮರ್ಶಕರು ಪಂಪನಲ್ಲಿ ಯಾವುದನ್ನು ಲೋಪವನ್ನಾಗಿ ಕಂಡಿದ್ದರೋ, ಅದು ಸುಬ್ಬಣ್ಣನವರಿಗೆ ಪಂಪನ ಹೆಚ್ಚುಗಾರಿಕೆಯಾಗಿ ಕಂಡಿದೆ.

"ರಾಜಾಭಿಮಾನದಿಂದಾಗಿ ರೂಢಿಸಿಕೊಂಡ ತಗಳ್ಚುವ ತಂತ್ರವೇ ಪಂಪನ ಕಾವ್ಯದಲ್ಲಿ ಅತ್ಯಂತ ದುರ್ಬಲನಾಡಿ ಎಂದು ವಿಮರ್ಶಕರು ಪರಿಗಣಿಸಿದರೂ ನಿಜವಾಗಿ ಪಂಪನು ಅದನ್ನು ತನ್ನ ಪ್ರಬಲ ಪ್ರಮುಖ ಸಾಧನೆಯುಂಬಂತೆ ಯಾವ ಅಳುಕು ಅಸ್ಥಿರತೆಗಳಿಲ್ಲದ ಖಚಿತ ನಿಶ್ಚಯದಿಂದ ಬಳಸಿದ್ದಾನೆ"[೧೦] ಎಂದು ನೇರವಾಗಿ, ಸ್ಪಷ್ಟವಾಗಿಯೇ ಹೇಳಿಬಿಡುತ್ತಾರೆ. ಅಲ್ಲದೆ ಅದನ್ನು ತಮ್ಮ ಲೇಖನದುದ್ದಕ್ಕೂ ಸಮರ್ಥಿಸಿಕೊಳ್ಳುತ್ತಾ ಹೋಗುತ್ತಾರೆ.

ಪಂಪನಿಗೆ ಬಹುಮುಖ್ಯವಾಗಿ ಅಗತ್ಯವಾದುದು, ರಾಜ್ಯವ್ಯವಸ್ಥೆ ಮತ್ತು ಧರ್ಮವ್ಯವಸ್ಥೆಗಳಿಂದ ತನ್ನ ಬದುಕಿನ ಅನುಭವಗಳನ್ನು ಶೋಧಿಸಿಕೊಳ್ಳುವುದು. ಚರಿತ್ರೆ ಮತ್ತು ಧರ್ಮ ಇವೆರಡೂ ಒಗ್ಗೂಡಿ ಮನುಷ್ಯ ಸಮುದಾಯವನ್ನು ವ್ಯವಸ್ಥಿತವಾಗಿ, ಸಂಘಟಿತವಾಗಿ ಉಳಿಸಿರುತ್ತವೆಯಾದ್ದರಿಂದ, ಅವೆರಡೂ ಪಂಪನಿಗೆ ಬಹಳ

---

[೯] ಅದೇ, ಪು.೨೭೮.

[೧೦] ಅದೇ, ಪು.೨೮೦.

ಪ್ರಧಾನವಾದುವೆಂದು ಕಂಡಿತು. ಒಂದು ಸಮುದಾಯದ ವ್ಯವಸ್ಥೆ, ರಕ್ಷಣೆ, ವಾತ್ಸಲ್ಯ, ಪೋಷಣೆ, ಹಿಂಸೆ ಮತ್ತು ರಾಜರ ನಡುವಿನ ಮತ್ಸರ, ದಾಯಾದಿತನ, ಯುದ್ಧ ಇತ್ಯಾದಿಗಳನ್ನು ತನ್ನ ಕಾವ್ಯದಲ್ಲಿ ಶೋಧಿಸಿಕೊಳ್ಳಲಾಗುತ್ತದೆ. ಅಂದರೆ ಒಂದು ಕಾಲಘಟ್ಟದ ಚರಿತ್ರೆಯನ್ನು ಮತ್ತು ಧರ್ಮವ್ಯವಸ್ಥೆಯನ್ನು ಒಟ್ಟಾಗಿ ಏಕಕಾಲದಲ್ಲಿ ಕಟ್ಟಿಕೊಡುತ್ತಿದ್ದಾನೆ.

ಆಧುನಿಕ ಸಾಹಿತ್ಯದ ಸಂದರ್ಭದಲ್ಲಿ ಪಾಶ್ಚಾತ್ಯ ಸಾಹಿತ್ಯದ ರಿಯಾಲಿಸಮ್ (ವಾಸ್ತವವಾದ) ಪಂಥದ ವಿಮರ್ಶಕರಿಗೆ, ಪಂಪನ ಕಾವ್ಯದಲ್ಲಿ ಚರಿತ್ರೆ ಸೇರಿಕೊಂಡಿರುವುದು ದೋಷವಾಗಿ ಕಂಡಿತು. ಮುಳಿಯರವರಿಗೆ ಇದೆ ಅಂಶ ಪಂಪನ ಹೆಚ್ಚುಗಾರಿಕೆಯಾಗಿ ಕಂಡಿತು. ಅರಿಕೇಸರಿಯ ಇತಿಹಾಸವನ್ನು ಹೇಳುವುದು ಹಾಗೂ ಮಹಾಭಾರತದಲ್ಲಿ ಅದರೊಂದಿಗೆ ತಗುಳ್ಚಿ ಹೇಳುವುದು ಇವೇ ಪಂಪನ ಮೂಲೋದ್ದೇಶವಾಗಿದೆ. ಆ ಕಾರಣದಿಂದಲೇ ತನ್ನ ಕೃತಿಯನ್ನು 'ಸಮಸ್ತಭಾರತ' ಎಂದು ಕರೆದುಕೊಂಡಿದ್ದಾನೆಂದು ಮುಳಿಯರವರು 'ನಾಡೋಜ ಪಂಪ'ದಲ್ಲಿ ಪ್ರತಿಪಾದಿಸಿದರು. ಮುಳಿಯರವರ ಈ ಪ್ರತಿಪಾದನೆಯೆ ಸುಬ್ಬಣ್ಣನವರಿಗೆ ಪ್ರಿಯವಾಗುತ್ತದೆ. ಈ ಜಾಡನ್ನು ಹಿಡಿದು ಅವರು ಭಿನ್ನವಾಗಿ ಆಲೋಚಿಸಲು ತೊಡಗುತ್ತಾರೆ.

ಕೇವಲ ಪ್ರಾಚೀನ ಕೃತಿಗಳಿಗೆ ಮಾತ್ರವೆ ಭಿನ್ನವಾಗಿ ಆಲೋಚಿಸದೆ ಒಟ್ಟು ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ವೈಯಕ್ತಿಕ ತುರ್ತಿನಿಂದ ತಮ್ಮ ಚಿಂತನಾ ಲಹರಿಯನ್ನು ಹರಿಯಬಿಡುತ್ತಾರೆ. ಉದಾಹರಣೆಗೆ, 'ಆಧುನಿಕ ಕನ್ನಡ ಸಾಹಿತ್ಯಕ್ಕೆ ಹೀಗೆ ಬನ್ನಿ' ಎಂಬ ಲೇಖನದಲ್ಲಿ ನೋಡಬಹುದು. ಇದೊಂದು ದೀರ್ಘ ವಿಮರ್ಶಾಲೇಖನವಾಗಿದ್ದು, ಸಾಹಿತ್ಯ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಮರ್ಶೆಯಾಗಿ ಮೂಡಿಬಂದಿದೆ. ಪಶ್ಚಿಮದ ಚಿಂತನೆಯಿಂದ ತಂದ ಎರವಲುಗಳನ್ನು ಯಥವತ್ತಾಗಿ ನಾವು ಬಳಸಿಕೊಂಡು ಕೃತಿಪರೀಕ್ಷೆಗೆ ತೊಡಗುವುದರಿಂದ, ಸೃಜನಶೀಲ ಕ್ರಿಯೆಯು ಟೊಳ್ಳಾಗುತ್ತದೆ ಎಂದು ಎಚ್ಚರಿಸುತ್ತಾರೆ, ಅಲ್ಲದೆ, "ಪಾಶ್ಚಾತ್ಯರಿಂದ ನಾವು ಸ್ವೀಕರಿಸಿದ್ದು ಒಂದು ರೀತಿಯಲ್ಲಿ, ಸೆಕೆಂಡ್‌ಹ್ಯಾಂಡ್ ವಿಜ್ಞಾನ, ವಿಜ್ಞಾನವೇನು ಈ ಕಳೆದ ಸುಮಾರು ನೂರು ನೂರೈವತ್ತು ವರ್ಷಗಳಲ್ಲಿ ಪಾಶ್ಚಾತ್ಯರ ವಿಜ್ಞಾನ ಮೂಲವಾದ ಬಿರುಕು ಸಂಸ್ಕೃತಿಗಳಿಂದ ಅನೇಕಾನೇಕವನ್ನು ಹೀಗೆ ಎರವಲು ಎತ್ತಿಕೊಂಡಿದ್ದೇವೆ. ಆತುರಾತುರವಾಗಿ ಹಸಿ ಹಸಿಯಾಗಿ ಬಾಚಿಕೊಂಡಿದ್ದೇವೆ. ಈ ಅಣಕದ ವಿಕೃತಿಗಳು, ನೆನೆದರೆ, ನಮಗೇ ಅಸಹ್ಯ ಹುಟ್ಟಿಸುತ್ತವೆ."[೬]

ಪಾಶ್ಚಾತ್ಯರಿಂದ ನಾವು ವಿವೇಕದಿಂದ ವಿಜ್ಞಾನವನ್ನು ಪಡೆದುಕೊಳ್ಳಲಿಲ್ಲ. ನಮ್ಮ ಸ್ವೋಪಜ್ಞತೆಯು ಸಂಪೂರ್ಣವಾಗಿ ಕಳೆಗುಂದಿದೆ. ಹಾಗಾಗಿ ನಮ್ಮಲ್ಲಿ ಸಾಂಸ್ಕೃತಿಕ ದಾರಿದ್ರ್ಯವು ಹೇಸಿಗೆ ಹುಟ್ಟಿಸುವಷ್ಟು ಹಬ್ಬಿಕೊಂಡಿದೆ ಎಂದು ಹೇಳುತ್ತಾರೆ. ಪಾಶ್ಚಾತ್ಯರಿಗೆ ವೈಜ್ಞಾನಿಕ ಯಾಂತ್ರಿಕವು ಅವರದೇ ಆದ ಕರ್ಮಫಲವಾಗಿ, ಅತ್ಯನಿವಾರ್ಯವಾಗಿ ಸಂಭವಿಸಿ ಬಂದದ್ದು ಮತ್ತು ಅವರ ಬದುಕನ್ನು ಇಡಿಯಾಗಿ ಅದು ಆವರಿಸಿಕೊಂಡು ಬಿಟ್ಟಿದೆ. ಆದರೆ ನಮ್ಮದು ಹಾಗಲ್ಲ: "ವಿಜ್ಞಾನ ನಾಗರೀಕತೆಯೆನ್ನುವುದು ನಮಗೆ, ಹಾಗೆ ಬೆನ್ನು ಹತ್ತಿದ 'ಕರ್ಮವಲ್ಲ', ಆಯ್ಕೆಯ ಸರಕು, ಬಹುಮಟ್ಟಿಗೆ ಆಯ್ಕೆಯ ಎರಡು ವಸ್ತುಗಳನ್ನು ಎದುರಿಗಿಟ್ಟುಕೊಂಡು, ವಿವೇಚಿಸಿ, ಅದರದರ ಅಪೇಕ್ಷಣೀಯ ಅಂಕಗಳನ್ನು ಕೊಂಡು ಒಗ್ಗೂಡಿಸಿಕೊಂಡು ಬಳಸಿಕೊಳ್ಳುವಂಥ

[೬] ಅದೇ, ಪು.೨೯.

ಸ್ವಾತಂತ್ರ್ಯವು ನಮಗಿದ್ದಂತೆ ಅವರಿಗಿರಲಿಲ್ಲ"[೭] ಎನ್ನುತ್ತಾರೆ. ಅಂದರೆ ನಮ್ಮದೇ ಆದ ಸ್ವಂತ ಗತಿಗೆ ಪ್ರತಿಯಾಗಿ ಎದುರಾದುದನ್ನು ಕಾಲಕ್ರಮೇಣ ಪಳಗಿಸಿಕೊಂಡು ಮತ್ತು ನಿಮ್ಮೊಳಗಿದ್ದ ವಾಂಛೆ ಅಭೀಪ್ಸೆಗಳನ್ನು ವಿಸರ್ಜಿಸಿಕೊಳ್ಳುತ್ತಲೂ ಹೊಸ ಸಂಗತಿಗಳಿಗೆ ನಮ್ಮನ್ನು ತೆರೆದುಕೊಳ್ಳಬೇಕು, ಸೃಜಿಸಿಕೊಳ್ಳಬೇಕು ಎಂದು ಎಚ್ಚರಿಸುತ್ತಾರೆ.

"ಪಾಶ್ಚಾತ್ಯರಿಂದ ಬಂದ ರಿಯಾಲಿಸಮ್ (ವಾಸ್ತವತೆ) ಕಲ್ಪನೆಯು ನಮ್ಮ ನವೋದಯ ಪ್ರಾರಂಭದ ವಿಮರ್ಶಕರಿಗೆ ಮಾತ್ರವಲ್ಲ, ಪಾಶ್ಚಾತ್ಯ ಶಿಕ್ಷಣ ಪಡೆದ ನಮಗೆಲ್ಲರಿಗೂ ಒಂದು ನಂಬಿಕೆಯಾಗಿ ತಲೆಯಲ್ಲಿ ಕೂತು ಹೋಗಿದೆ, ಇವತ್ತಿಗೂ"[೮] ಎಂಬ ಮಾತುಗಳನ್ನು 'ಪಂಪನ ಕವಿತೆ : ಅನುಸಂಧಾನಕ್ಕೆ ಮಾರ್ಗ' ಎಂಬ ಲೇಖನದಲ್ಲಿ ಹೇಳಿಕೊಳ್ಳುತ್ತಾರೆ. ರಿಯಾಲಿಸಮ್ ಕಲ್ಪನೆಯೇ ತುಂಬಾ ತ್ರಾಸವಾದುದು ಎಂಬ ಗ್ರಹಿಕೆ ಸುಬ್ಬಣ್ಣನವರದು. ನಾಟಕದಲ್ಲಿ ಇದನ್ನು ಸ್ಪಷ್ಟವಾಗಿ ಬ್ರೆಕ್ಟ್‌ನ ಮೂಲಕ ಗುರುತಿಸಿಕೊಂಡಿದ್ದಾರೆ. ತಂತ್ರವನ್ನಾಗಿ ರೂಪಿಸಿಕೊಂಡು ರಿಯಾಲಿಸಮ್‌ನನು ತೊಲಗಿಸಿದ ಬ್ರೆಕ್ಟ್, ಈ ಕಾರಣದಿಂದಲೇ ಸುಬ್ಬಣ್ಣನವರಿಗೆ ಪ್ರಿಯವಾಗುತ್ತಾರೆ ಮತ್ತು ಜಪಾನಿನ ಕುರೊಸವನನ್ನು ಇದೇ ಕಾರಣಕ್ಕಾಗಿ ಮೆಚ್ಚಿಕೊಳ್ಳುತ್ತಾರೆ.

ವಿಮರ್ಶಕರು, ವಾಸ್ತವವಾದದ ಹಿನ್ನೆಲೆಯಲ್ಲಿ 'ಕಾನೂರು ಹೆಗ್ಗಡತಿ'ಯನ್ನು ಅಧ್ಯಯನ ಮಾಡಿರುವುದರಿಂದ ಹೂವಯ್ಯನ ಪಾತ್ರವು ನಿಜವೆನಿಸದೆ ಹೋಗಿರುವುದನ್ನು ಮನದಟ್ಟು ಮಾಡಿಕೊಳ್ಳುತ್ತಾರೆ. "ಒಮ್ಮೆ ರಿಯಾಲಿಸಮ್ ವ್ಯಸನದಿಂದ ಬಿಡಿಸಿಕೊಂಡು ಬಿಟ್ಟವೆಂದರೆ ಹೂವಯ್ಯ ಸಮಸ್ಯೆಯಾಗುವುದಿಲ್ಲ. 'ಕಾನೂರು ಹೆಗ್ಗಡತಿ'ಯು ಬಹುಮಟ್ಟಿಗೆ ವಾಸ್ತವಶೈಲಿಯಲ್ಲೇ ಇದೆ. ಆದರೆ ನಾಯಕ ಪಾತ್ರವಾದ ಹೂವಯ್ಯನ ಚಿತ್ರಣವು ಅಂಥ ನಿಷ್ಠುರ ವಾಸ್ತವ ಶೈಲಿಯದಲ್ಲ. ಇದನ್ನು ಒಮ್ಮೆ ಗ್ರಹಿಸಿ ಕೊಂಡವೆಂದರೆ ಮುಂದೆ ಓದುಗರಿಗೆ ತೊಂದರೆಯಾಗದು"[೯] ಎಂಬ ಮಾರ್ಗವನ್ನು ಹೊಸ ಅಧ್ಯಯನಕ್ಕಾಗಿ ತೋರಿಸಿಕೊಡುತ್ತಾರೆ.

ಹೂವಯ್ಯನನ್ನು ಪಾಶ್ಚಾತ್ಯ ಕಲ್ಪನೆಯ ನೆಲೆಯಲ್ಲಿಟ್ಟು ನೋಡುವುದರ ಬದಲಾಗಿ, ಜನಪದ –ಜೀವನ ಸನ್ನಿವೇಶದ ಫಲವಾಗಿ ನೋಡಬೇಕು. ಆಧುನಿಕತೆಯು ವ್ಯಾಪಿಸುತ್ತಿರುವ ಸುತ್ತ–ಮುತ್ತಲ ಹಳ್ಳಿಗಳ ಮೇಲೆ ಹೂವಯ್ಯನ ಪ್ರಭಾವ ಪ್ರಮುಖ ಕಾರಣ ಎಂಬುದನ್ನು ಗುರುತಿಸಿಕೊಳ್ಳಬೇಕು ಅಂದರೆ ಆತನನ್ನು 'ಸಮುದಾಯದ ಉಪಘಟಕವಾಗಿ ನೋಡಬೇಕು ಎಂಬುದು ಸುಬ್ಬಣ್ಣನವರ ಗ್ರಹಿಕೆಯಾಗಿದೆ.

ಸುಬ್ಬಣ್ಣನವರು ಇನ್ನೊಂದು ಬಹುಮುಖ್ಯ ಒಳನೋಟವನ್ನು ಕೊಡುತ್ತಾರೆ. ಹೂವಯ್ಯನು, ಅನಂತಮೂರ್ತಿ, ಲಂಕೇಶ್, ತೇಜಸ್ವಿ ('ಅವಸ್ಥೆ'ಯ ಕೃಷ್ಣಪ್ಪ, 'ಬಿರುಕು'ವಿನ ಬಸವರಾಜ ಮತ್ತು 'ಚಿದಂಬರ ರಹಸ್ಯ'ದ ಜಯರಾಮ)ಯವರಲ್ಲಿ ಮರುಹುಟ್ಟು ಪಡೆದುಕೊಂಡ ಪ್ರಕ್ರಿಯೆಯನ್ನು ಗುರುತಿಸುತ್ತಾರೆ. ಒಟ್ಟಾರೆ, ಕುವೆಂಪುವಿನಿಂದ, ದೇವನೂರರ ತನಕ ಆಧುನಿಕ ಕನ್ನಡ ಸಾಹಿತ್ಯವು ಹೇಗೆ ಒಂದಲ್ಲ ಒಂದು ಬಗೆಯಲ್ಲಿ ತಳುಕು

---

೭ ಅದೇ, ಪು.೩೦೨.

೮ ಅದೇ, ಪು.೨೮೧.

೯ ಅದೇ, ಪು.೩೧೩.

ಹಾಕಿಕೊಂಡಿದೆಯೆನ್ನುವುದನ್ನು ವಿವರಿಸುತ್ತಾ ಹೋಗುತ್ತಾರೆ. ಅವರ ಪ್ರಕಾರ 'ಆಧುನಿಕ ಕನ್ನಡ ಸಾಹಿತ್ಯ'ವೆಂದರೆ:

". . . ಹಲವು ಉತ್ತಮ ಮಧ್ಯಮ ಸಾಮಾನ್ಯಕೃತಿಗಳ ಒಂದು ಗ್ರಂಥ ಭಂಡಾರವಲ್ಲ. ವಿವಕ್ತವಾಗಿ ಉಳಿಯದೆ, ಒಂದರೊಡನೊಂದು ಒಂದರೊಳಗೊಂದು ಹೊಕ್ಕು ಹಾದು ಸ್ವತಃ ಒಂದು ಜೀವಜಾಲವಾಗಿ ಹೆಣೆದುಕೊಂಡಿರುವಂಥದು ಮತ್ತು ಇನ್ನೊಂದು ಕಡೆ ಪ್ರಾಚೀನ ಸಾಹಿತ್ಯದ ಹೊಕ್ಕುಳುಬಳ್ಳಿಗೆ ಬಿಗಿದುಕೊಂಡು ಅದರ ಸಂತಾನ ಸಾತತ್ಯವಾಗಿರುವಂಥದು. ಅನೇಕ ಸಹಸ್ರ ವರ್ಷಗಳ ಅನೇಕ ಕೋಟಿ ಜನರ ಅನುಭವ ಸಂಚಲನವುಳ್ಳ ಜೀವಂತ ಪ್ರಪಂಚ ಇದು."[೧೦]

'ಅನಂತಮೂರ್ತಿಯವರ ಕಾದಂಬರಿ ತ್ರಿವಳಿ'ಯಲ್ಲಿ ಅನಂತಮೂರ್ತಿಯವರು ಹೇಗೆ ಕುವೆಂಪು, ಕಾರಂತ, ಮಾಸ್ತಿಯವರ ಅನ್ವೇಷಣೆಯನ್ನು ಮುಂದುವರಿಸಿಕೊಂಡು, ದೃಢವಾಗಿಸುತ್ತ ಹೋದರು ಎಂಬುದನ್ನು ಹೊಸ ಆಲೋಚನೆಯ ಮೂಲಕ ಸುಬ್ಬಣ್ಣನವರು ಕಂಡುಕೊಳ್ಳುತ್ತಾರೆ. 'ಸಂಸ್ಕಾರ', 'ಭಾರತೀಪುರ' ಮತ್ತು 'ಅವಸ್ಥೆ' – ಈ ಮೂರು ಕಾದಂಬರಿಗಳನ್ನು ಒಂದೇ ವಿಷಯದ ಮೂರು ಸಂಪುಟಗಳೆಂಬಂತೆ ಓದಿಕೊಳ್ಳುತ್ತಾರೆ ಅಥವಾ ಅಧ್ಯಯನ ಮಾಡುತ್ತಾರೆ. ಒಂದೇ ಕಾಲ (ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರದ ಎರಡು ಕೊಂಡಿಗಳು) ಘಟ್ಟದ, ಬೇರೆ ಬೇರೆ ಪ್ರದೇಶಗಳಲ್ಲಿ ನಡೆದ ಮೂರು ರೀತಿಯ ವಿಭಿನ್ನ ಕಥನಗಳು ಎಂಬುದಾಗಿ ಗ್ರಹಿಸಿಕೊಳ್ಳುತ್ತಾರೆ. ಈ ಮೂರು ಕಾದಂಬರಿಗಳನ್ನು ವಿವಕ್ತ ಅಧ್ಯಯನ ಮಾಡದೆ ಇದ್ದುದರಿಂದಲೇ, ಜಾಗತಿಕ ಸಾಹಿತ್ಯದ ಜೊತೆಯಿಟ್ಟು ನೋಡಲು ಸಾಧ್ಯವಾಯಿತೆನಿಸುತ್ತದೆ. ಚಿನುಅ ಅಚಿಬೆಯ 'ಆಫ್ರಿಕನ್ ತ್ರಿವಳಿ' ('ಥಿಂಗ್ಸ್‌ಪಾಲ್ ಅಪಾರ್ಟ್', 'ಆ್ಯರೋ ಆಫ್ ಗಾಡ್' ಮತ್ತು 'ನೋಲಾಂಗರ್ ಎಡ್‌ಈಸ್')ಗಳ ಜೊತೆ ಅನಂತಮೂರ್ತಿಯವರ ಕಾದಂಬರಿ ತ್ರಿವಳಿಗಳನ್ನು ಇಟ್ಟು ನೋಡುತ್ತಾರೆ.

ಸ್ವಾತಂತ್ರಪೂರ್ವ ಮತ್ತು ಸ್ವಾತಂತ್ರ್ಯನಂತರದ ರಾಜಕೀಯ ಮಹತ್ವಾಕಾಂಕ್ಷೆಗಳನ್ನು ಗುರುತಿಸಿಕೊಳ್ಳುತ್ತಲೇ, ಆ ಕಾಲದ ಇಂಡಿಯಾದ ಇತಿಹಾಸವನ್ನು ಬಿಂಬಿಸುವ ಮಹತ್ವದ ಕೃತಿಗಳನ್ನಾಗಿ ಕಾಣಿಸುತ್ತಾರೆ. ಸುಬ್ಬಣ್ಣನವರು ತಾನು ಈ ರೀತಿ ಆಲೋಚಿಸುವುದಕ್ಕೆ ಕಾರಣವೇನೆಂಬುದನ್ನು ಹೀಗೆ ಹೇಳಿಕೊಳ್ಳುತ್ತಾರೆ. "ಅನಂತಮೂರ್ತಿಯವರ ಕಾದಂಬರಿಗಳು ಕಥೆಯ ಮಟ್ಟದಲ್ಲಿ ಒಂದರಿಂದೊಂದಕ್ಕೆ ಪ್ರತ್ಯೇಕವೆನಿಸಿದಾಗ್ಯೂ ಆಂತರಿಕ ಪ್ರಕ್ರಿಯೆಯ ಏಕೋವಾಹಿನಿಯನ್ನು ಶೋಧಿಸುವ ಸಾಹಸದಲ್ಲಿ ಬೆಸೆದುಕೊಳ್ಳುತ್ತದೆ. ಇವನ್ನು ತ್ರಿವಳಿಯೆಂದು ಭಾವಿಸಲು ನನಗೆ ಪ್ರೇರಣೆ ಕೊಟ್ಟದ್ದು ಈ ಅಂಶವೇ."[೧೧]

ಸುಬ್ಬಣ್ಣನವರ ಸಾಹಿತ್ಯದ ತಾತ್ವಿಕ ನಿಲುವುಗಳು ಯಾವುದು ಎಂಬುದನ್ನು ಯೋಚಿಸಹೊರಟರೆ, ಅಧ್ಯಾಯದ ಆರಂಭದಲ್ಲಿ ಉಲ್ಲೇಖಿಸದ ಅವರದೆ ಮಾತುಗಳು ಇಲ್ಲಿ ನೆನಪಿಗೆ ಬರುತ್ತವೆ. "ಒಟ್ಟಿನಲ್ಲಿ ನಿತ್ಯ ಹಗಲು ನಾವು ನಡೆದಾಡುವ ಬೀದಿಯನ್ನು ಬದುಕನ್ನೂ ಮರೆತು ಸಾಹಿತ್ಯವೊಂದೆ ಜಗತ್ತು ಅನ್ನುವ ಹಾಗೆ, ಸಮಿನಾರ್ ಕೋಣೆಯ ನಿರ್ವಾತ ವಿಸ್ಮೃತಿಯಲ್ಲಿ ನಿದ್ದೆ ನಡೆದಾಟದ ಥರಾ ನಡೆವ ಚರ್ಚೆಗಳು ನನ್ನಲ್ಲಿ ವಿಚಿತ್ರ

---

[೧೦] ಅದೇ, ಪು.೩೧೩.

[೧೧] ಅದೇ, ಪು.೩೨೮.

ಭಯ ಹುಟ್ಟಿಸುತ್ತವೆ"[೧೨] ಸುಬ್ಬಣ್ಣನವರಿಗೆ 'ಸಾಹಿತ್ಯ'ವೇ ಶ್ರೇಷ್ಠ ಎಂಬುದರ ನಿರಾಕರಣೆಯನ್ನು ಇದು ಹೇಳುತ್ತದೆಯಲ್ಲದೆ, ಅವರು ಸಾಹಿತ್ಯವನ್ನು ಗ್ರಹಿಸಿಕೊಂಡ ರೀತಿಯ ಮೇಲೆ ಬೆಳಕು ಚೆಲ್ಲುತ್ತದೆ. ಸಾಹಿತ್ಯ ಮತ್ತು ಇನ್ನಿತರ ಕಲೆಗಳು ಎಲ್ಲರಿಗೂ ದಕ್ಕಬೇಕೆಂಬ ನಿಲುವಿಗೆ ಅವರು ಬದ್ಧರು. ಇದನ್ನು 'ಶ್ರೇಷ್ಠತೆಯ ವ್ಯಸನ' ಎಂಬ ಲೇಖನದಲ್ಲಿ ಸಾಮಾಜಿಕ, ಸಾಹಿತ್ಯ, ಸಾಂಸ್ಕೃತಿಕ ನಿರ್ವಚನಗಳ ಮೂಲಕ ತಿಳಿದುಕೊಳ್ಳಬಹುದು.

ತಾನು ಒಬ್ಬ ವ್ಯವಸಾಯಗಾರನಾಗಿ, ಅಡಕೆ ಬೆಳೆದುಕೊಂಡಿರುವ ಸುಬ್ಬಣ್ಣನವರಿಗೂ ಅಭಿವ್ಯಕ್ತಿಬೇಕು. ಜೊತೆಗೆ ಭಾಷೆ, ಸಾಹಿತ್ಯ ಮತ್ತು ವಿಮರ್ಶೆಯೂ ಬೇಕು. ಆದರೆ ಇವೆಲ್ಲವನ್ನೂ ಒಬ್ಬ 'ತಜ್ಞ' ಅಥವಾ 'ದಕ್ಷ'ನಂತೆ ನೋಡದೆ, ಒಬ್ಬ ಸಾಂಸ್ಕೃತಿಕ ಜವಾಬ್ದಾರಿಯ ಸಾಮಾನ್ಯ ಮನುಷ್ಯನಾಗಿ, ತಾನು ನಿಂತ ನೆಲದಲ್ಲಿ ಇಡೀ ಜಗತ್ತನ್ನೇ 'ಕೇಂದ್ರ ಪ್ರಜ್ಞೆ'ಗೆ ತಂದುಕೊಳ್ಳಬೇಕು. ತನಗೆ ಅನಿಸಿದ್ದನ್ನು ವಿವಕ್ತವಾಗಿ ಹೇಳದೆ, ಒಂದರೊಳಗೊಂದು ಹೆಣೆಗೆಗಳನ್ನಾಗಿ ಗ್ರಹಿಸಿ ಇಡಿಯಾಗಿ ಯಾವುದೇ ಪೂರ್ವಗ್ರಹವಿಲ್ಲದೆ ಅಭಿವ್ಯಕ್ತಿಸಬೇಕು.

ಒಟ್ಟು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಮಾತ್ರವಲ್ಲದೆ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ರಂಗಗಳಿಗೆ ಸಂಬಂಧಿಸಿದಂತೆ ಸುಬ್ಬಣ್ಣನವರು ಎಲ್ಲರಿಗಿಂತ ವಿಶಿಷ್ಟವಾಗಿ ಚಿಂತಿಸುವುದು ಮತ್ತು ಭಿನ್ನವಾಗಿ ನಿಲ್ಲುವುದು ಈ ರೀತಿಯ ಗ್ರಹಿಕೆ, ಆಲೋಚನೆಗಳಿಂದಲೆ ಎಂಬುದು ನನ್ನ ಅಭಿಮತ. ಅವರು ಒಬ್ಬ ಪ್ರಮುಖ ಬರಹಗಾರರು ಎಂಬುದನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು. ಅವರ ಬರವಣಿಗೆಯ ಸ್ವರೂಪ ಹಾಗೂ ಜೀವನಕ್ರಮ ಇವೆರಡೂ ಪ್ರಕ್ರಿಯೆಗಳು ಒಂದಕ್ಕೊಂದು ತಳುಕುಹಾಕಿಕೊಂಡು ವಿವಿಧರಂಗಗಳ ನೇಪಥ್ಯದಲ್ಲಿ ಹರಿಯುವ ಚಿಂತನಾಲಹರಿಯನ್ನು ಅವಶ್ಯ ಗಮನಿಸಬೇಕಾಗುತ್ತದೆ.

ವಿಮರ್ಶಕರಾದ ಟಿ.ಪಿ. ಅಶೋಕರು ಹೇಳುವಂತೆ 'ಸುಬ್ಬಣ್ಣನವರ ವಿಮರ್ಶೆ ಕವಿ ಕೇಂದ್ರಿತವೂ ಅಲ್ಲ, ಕೃತಿಕೇಂದ್ರಿತವೂ ಅಲ್ಲ. ಅದು ಓದುಗ ಕೇಂದ್ರಿತ'. ವಿಮರ್ಶೆಯೆಂದರೆ 'ಬಟಾಬಯಲಿನಲ್ಲಿ ಚತುರ ಚೆಂಡಾಟ ನಡೆಸುವ ಥರದ್ದಾಗದೆ ಕೃತಿಯ ಆಪ್ತ ಓದು ಅವರ ಅನಾವರಣವಾಗಲೇಬೇಕೆಂಬ ನಿಲುವಿಗೆ ಸುಬ್ಬಣ್ಣನವರು ಬದ್ಧರಾದವರು. ಅವರ ಪ್ರಕಾರ, 'ನನಗೆ ಹೀಗೆ ಅರ್ಥವಾಗುತ್ತದೆ' ಎಂಬ ವಿನಯದ ವಿಮರ್ಶೆ ಬೇಕಾಗಿದೆ. ಇದು ಲೀವೀಸ್ ಹೇಳುವ ಮಾದರಿಗೆ ತೀರಹತ್ತಿರವಾದುದು. ಲೀವೀಸ್ ವಿಮರ್ಶೆಯ ವ್ಯಾಖ್ಯಾನದ ಸಂದರ್ಭದಲ್ಲಿ 'ನನಗೆ ಹೀಗನಿಸುತ್ತದೆ ನಿನಗೆ?' ಎಂದು ಕೇಳುತ್ತಾನೆ. ಯಾವುದೇ ಪೂರ್ವಗ್ರಹಗಳಾಗಲಿ ಅಥವಾ ಮಾನದಂಡಗಳಾಗಲಿ ಗೈರುಹಾಜರಾದಾಗ ಆ ಕೃತಿಯ ಆಪ್ತ ಓದು ಅನಾವರಣಗೊಳ್ಳುತ್ತದೆ. ಸುಬ್ಬಣ್ಣನವರು ಒಂದು ಕೃತಿಯನ್ನು ಅಧ್ಯಯನ ಮಾಡಿದಾಗ ತನಗೆ ಏನನ್ನಿಸುತ್ತದೋ ಅದನ್ನು ನೇರವಾಗಿ, ಸ್ಪಷ್ಟವಾಗಿ ನಿರ್ಭಿಡೆಯಿಂದ ಬರೆಯುತ್ತಾ ಅಥವಾ ಹೇಳುತ್ತಾ ಹೋಗುತ್ತಾರೆ. ಈ ಕಾರಣದಿಂದಲೇ ಅವರು ಕೃತಿಯನ್ನು ನಿಕಟವಾಗಿ ಓದಲು ಸಾಧ್ಯವಾಗಿದೆ ಮತ್ತು ಬಹುತೇಕ ವಿಮರ್ಶಕರಿಗೆ ಸಾಧ್ಯವಾಗದ ಒಳನೋಟಗಳು ದಕ್ಕಿವೆ.

ಸುಬ್ಬಣ್ಣನವರು ಕೃತಿಯನ್ನು ಬಿಡಿಯಾಗಿ ವಿಶ್ಲೇಷಿಸುವುದರಲ್ಲಾಗಲಿ ಅಥವಾ ಪ್ರಾಯೋಗಿಕ ವಿಮರ್ಶೆಯಲ್ಲಾಗಲಿ ಅಷ್ಟೊಂದು ಆಸಕ್ತಿ ತಾಳುವುದಿಲ್ಲ. ಒಂದು ಕೃತಿಯನ್ನು ಕಾಲ, ಸಂದರ್ಭ ಮತ್ತು ಐತಿಹಾಸಿಕ ನೆಲೆಯಲ್ಲಿಟ್ಟು ಅರ್ಥೈಸಿಕೊಳ್ಳುತ್ತಾರೆ. ಕೃತಿಯನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲು, ಕಥೆಯ

---

[೧೨] ಅದೇ, ಪು.೨೯೮.

ಹೆಣಿಗೆಗಳು ಯಾವುದರೊಂದಿಗೆ ತಳಕು ಹಾಕಿಕೊಂಡಿವೆಯೆನ್ನುವುದನ್ನು ಅರಿಯಲು ಇತಿಹಾಸಕ್ಕೆ ಹೋಗುತ್ತಾರೆಯೆನಿಸುತ್ತದೆ. ವಿಮರ್ಶಕರಾದ ಟಿ.ಪಿ. ಅಶೋಕರವರು ಸುಬ್ಬಣ್ಣನವರ ವಿಮರ್ಶೆಯನ್ನು 'ಅನುಭವದ ಅಭಿವ್ಯಕ್ತಿ ವಿಮರ್ಶೆ' ಎಂದು ಕರೆಯುತ್ತಾ, ಈ ರೀತಿ ಹೇಳುತ್ತಾರೆ. ". . .ಈ ಬಗೆಯ ವಿಮರ್ಶೆ ಕವಿಯನ್ನು ಮಾತ್ರ ನೋಡುತ್ತಿರುವುದಿಲ್ಲ. ಕವಿಯ ಮೂಲಕವೂ ನೋಡುತ್ತಿರುತ್ತದೆ. ಕೃತಿಯನ್ನು ಮಾತ್ರ ನೋಡುವುದಿಲ್ಲ. ಕೃತಿಯ ಮೂಲಕವೂ ನೋಡುತ್ತದೆ. ಕವಿ ಅಥವಾ ಕೃತಿ ಇಲ್ಲಿ ಒಂದು ಚೌಕಟ್ಟು; Point of reference ಹಾಗಾಗಿ ಸುಬ್ಬಣ್ಣನವರಿಗೆ 'ಮೂಲಪಠ್ಯ', 'ಪಠ್ಯಶುದ್ಧತೆ', 'ಪಠ್ಯನಿಷ್ಠೆ' ಇಂಥ ಕಲ್ಪನೆಗಳ ಬಗ್ಗೆ ನಂಬಿಕೆ ಇಲ್ಲ. 'ಕೃತಿಸ್ವಾಮ್ಯ', 'ಕೃತಿ ಚೌರ್ಯ' ಇಂಥ ಕಲ್ಪನೆಗಳ ಬಗ್ಗೆಯೂ ವಿಶ್ವಾಸವಿಲ್ಲ."[೧೩]

ಸುಬ್ಬಣ್ಣವರ ವಿಮರ್ಶೆಯ ಮುಖ್ಯ ಕಾಳಜಿ, ಕೃತಿಕಾರ –ವಿಮರ್ಶಕ –ಓದುಗ ಎಂಬ ಶ್ರೇಣೀಕರಣವನ್ನು ನಿರಾಕರಿಸುವುದು ಮತ್ತು ಕೃತಿ ಪರೀಕ್ಷೆಯ ಸಂದರ್ಭದಲ್ಲಿ ಪರಂಪರೆಯೊಂದಿಗಿನ ಸಜೀವ ಸಂಬಂಧವನ್ನು, ಆ ಕೃತಿಯ ಮೂಲಕ ವರ್ತಮಾನದಲ್ಲಿ ಎತ್ತಿ ತೋರಿಸುವುದು. ಇದಕ್ಕಿಂತ ಮುಖ್ಯವಾಗಿ ಒಂದು ಸಮುದಾಯದಲ್ಲಿ ಪ್ರಕ್ರಿಯನಾಗಿರುವ ಎಲ್ಲ ಮನುಷ್ಯರೂ ಸಮಾನರು ಎಂಬ ಪ್ರಜಾಪ್ರಭುತ್ವ ತತ್ತ್ವಕ್ಕೆ ಬದ್ಧವಾಗಿರುವಂಥದು. ಹಾಗಾಗಿ ಶ್ರೇಣೀಕರಣವನ್ನು ಒಪ್ಪದೆ, ಸಹೃದಯ (ಸಾಮಾಜಿಕ)ನಿಗೆ ಹೆಚ್ಚು ಮಹತ್ವಕೊಡುತ್ತಾರೆ. 'ರಶೋಮೊನ್ ಅವಲೋಕನ'ದಲ್ಲಿ ಹೀಗೆ ಬರೆಯುತ್ತಾರೆ:

"ಯಾವುದೇ ಕಲಾಕೃತಿಯ ಅನುಸಂಧಾನದಲ್ಲಿ ಅಂತಿಮವಾಗಿ ಸಹೃದಯನೇ ಸೃಜನಕಾರನಾಗಿರುತ್ತಾನೆ. ಭಾರತೀಯ ಅಥವಾ ಪೌರ್ವಾತ್ಯ ಕಾವ್ಯಮೀಮಾಂಸೆಯಲ್ಲಂತೂ ಈ ಸಹೃದಯ ತತ್ವ ಬಹುಮುಖ್ಯವಾದ್ದು. ಕುರೊಸವ ತನ್ನ ತಂತ್ರದಿಂದ ಈ ಬಗೆಯ ಸಹೃದಯ ಸೃಜನಶೀಲತೆಗೆ ಹೆಚ್ಚಿನ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದಾನೆ. ಸಹೃದಿಯನು ತಟಸ್ಥನಾಗಿ ಉಳಿಯದೆ ಸೃಜನಶೀಲನಾಗಲೇ ಬೇಕಾದ ತುರ್ತನ್ನು ಆತ ಉಂಟುಮಾಡಿದ್ದಾನೆ."[೧೪]

ಹೀಗೆ ಸುಬ್ಬಣ್ಣನವರು ಸಾಹಿತ್ಯ, ಸಾಹಿತ್ಯವಿಮರ್ಶೆ, ಕಾವ್ಯಮೀಮಾಂಸೆ, ಸಮಾಜ ವಿಮರ್ಶೆ, ರಾಜಕೀಯ ವಿಮರ್ಶೆ, ಅಭಿನಯ, ಸಂಗೀತ, ರಂಗಭೂಮಿ, ಚಲನಚಿತ್ರ ಮತ್ತು ನಾಟ್ಯ – ಹೀಗೆ ಏಕಕಾಲದಲ್ಲಿ ಆಯಾಯ ಸಂದರ್ಭದಲ್ಲಿ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ವಿಮರ್ಶೆ ಮಾಡುತ್ತ ಬಂದಿದ್ದಾರೆ. ಈ ಎಲ್ಲ ರೀತಿಯ ಹೆಚ್ಚಳಗಳೆ ಅವರನ್ನು ಒಬ್ಬ ಅಪರೂಪದ ವಿಮರ್ಶಕನನ್ನಾಗಿ ರೂಪಿಸಿದೆ.

ಕೆ.ವಿ. ಸುಬ್ಬಣ್ಣನವರು ಪ್ರಧಾನವಾಗಿ ಸಂಸ್ಕೃತಿ ನಿಷ್ಟ ವಿಮರ್ಶಕರು, ಸಂಸ್ಕೃತಿನಿಷ್ಟ ವಿಮರ್ಶಕರಿಗೆ ಸಾಹಿತ್ಯ ಮಾತ್ರವೆ ಪ್ರಧಾನವಾಗಿರುವುದಿಲ್ಲ. ಹಾಗಾಗೆ ಬಹುಮುಖಿ ವ್ಯಕ್ತಿತ್ವದ ನೆಲೆಗಳನ್ನು ಅವರಲ್ಲಿ ನಾವು ಕಾಣಬಹುದು.

---

೧೩ ರಂಗಧಾಮ, ಶ್ರೀ ಕೆ.ವಿ. ಸುಬ್ಬಣ್ಣ ಅಭಿನಂದನ ಗ್ರಂಥ, ಸಂಪಾದಕ : ಟಿ. ಮಹಾಬಲೇಶ್ವರ ಭಟ್ಟ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೫, ಪು.೫೪.

೧೪ ಸುಬ್ಬಣ್ಣ, ಕೆ.ವಿ., ಲೇಖನ ಸಂಕಲನ ೧೯೫೪–೨೦೦೪, ಅರೆಶತಮಾನದ ಅಲೆಬರಹಗಳು, ಸಂಪಾದನೆ–ಟಿ.ಪಿ. ಅಶೋಕ, ಅಕ್ಷರ ಪ್ರಕಾಶನ, ಸಾಗರ, ೨೦೦೪, ಪು.೫೯೪.

**ಶ್ರೇಷ್ಠತೆಯ ವ್ಯಸನ :**

ಸುಬ್ಬಣ್ಣನವರ ಸಮಗ್ರ ಚಿಂತನೆಯ ಮೂಲಸೆಲೆಯನ್ನು 'ಶ್ರೇಷ್ಠತೆಯ ವ್ಯಸನ'ದ ಮೂಲಕವೆ ಗುರುತಿಸಬಹುದೆನಿಸುತ್ತದೆ. 'ಶ್ರೇಷ್ಠತೆ'ಯು ಒಂದು ಔನ್ನತ್ಯವಾದುದು ಎಂಬ ಧೋರಣೆಗೆ ವಿರುದ್ಧವಾದ ನಿಲುವೊಂದನ್ನು ತಳೆದು, ಪುನರ್ವ್ಯಾಖ್ಯಾನಕ್ಕೆ ಒಳಪಡಿಸಿದುದು ಅವರ ಗ್ರಹಿಕೆಯ ಸ್ವರೂಪದ ಬಗೆಗೆ ಬೆಳಕು ಚೆಲ್ಲುತ್ತದೆ.

'ಶ್ರೇಷ್ಠತೆ'ಯ ಕಲ್ಪನೆಯನ್ನು ಕುರಿತು ಮೊದಲಬಾರಿಗೆ ಅದನ್ನು ಪ್ರತಿಪಾದಿಸಿದವರು ಪ್ರಾಯಶಃ ಗೋಪಾಲಕೃಷ್ಣ ಅಡಿಗರೆ ಇರಬೇಕೆನಿಸುತ್ತದೆ. ಸಾಹಿತ್ಯ ಪರಿಷತ್ತನ್ನು ನಿರಂತರವಾಗಿ ವಿಮರ್ಶಿಸುತ್ತಲೇ ಬಂದ ಅವರು, 'ಸಾಹಿತ್ಯ ಪರಿಷತ್ತಿಗೊಂದು ಕರ್ತವ್ಯ ಸಂಹಿತೆ' ಎಂಬ ಲೇಖನದಲ್ಲಿ 'ಸಾಹಿತ್ಯದಲ್ಲಿ ಶ್ರೇಷ್ಠತೆ'ಯು ಶಾಶ್ವತವಾಗುಳಿಯುವಂತೆ ಶ್ರಮಿಸಬೇಕೆಂದು ಸಾಹಿತ್ಯ ಪರಿಷತ್ತಿಗೆ ಸೂಚಿಸುತ್ತಾರೆ. 'ಶ್ರೇಷ್ಠತೆ ಕಲ್ಪನೆ' ಎಂಬ ಮತ್ತೊಂದು ಲೇಖನದಲ್ಲಿ, ಜನಸಮುದಾಯದ ಅಭಿವೃದ್ಧಿಗೆ ಹಾಗೂ ಅದೊಂದು ಸತ್ವಪೂರ್ಣವಾಗಿ ಉಳಿಯಬೇಕಾದರೆ ಶ್ರೇಷ್ಠತೆ ಅತ್ಯವಶ್ಯಕ ಎಂಬ ನಿಲುವು ಅಡಿಗರದು. ಒಟ್ಟು ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ 'ಶ್ರೇಷ್ಠತೆ'ಯ ಕಲ್ಪನೆ ಅಡಿಗರಿಗೆ ಅತಿ ಅಗತ್ಯವಾಗಿ ಕಾಣುತ್ತದೆ.

'ಸಮತಮ' ಎಂಬ ದೃಷ್ಟಿಕೋನದ ಮೂಲಕ ಶ್ರೇಷ್ಠತೆಯ ಪರಿಕಲ್ಪನೆಯನ್ನು ಹೊಸ ಪರಿಭಾಷೆಯಲ್ಲಿ ಹೇಳಲಾಯಿತು. ಜಾತಿಗಳು ಮನುಷ್ಯ-ಮನುಷ್ಯರ ನಡುವೆ ಹೇಗೆ ಕಂದರವನ್ನುಂಟು ಮಾಡಿ ಅಂತರವನ್ನು ಕಾಯ್ದುಕೊಳ್ಳುತ್ತವೋ ಹಾಗೆ 'ಶ್ರೇಷ್ಠತೆ'ಯು ಕೂಡ ನಮ್ಮ ನಮ್ಮಗಳ ನಡುವೆ ಅಸೂಯೆ, ದ್ವೇಷ ಮತ್ತು ಅಂತರವನ್ನು ಸೃಷ್ಟಿಸುವಂತಹುದಾಗಿದೆ. ಈ ರೀತಿ ವೈಷಮ್ಯತೆಯನ್ನು ಬಿತ್ತುವ 'ಶ್ರೇಷ್ಠತೆ'ಯು ಸುಬ್ಬಣ್ಣನವರಿಗೆ ವ್ಯಸನವಾಗಿ ಕಂಡಿದೆ ಮತ್ತು ಅಂತಹುದು ಖಡಾಖಂಡಿತವಾಗಿ ಬೇಕಿಲ್ಲ.

ಸಮಾನತೆಯ ಪ್ರಶ್ನೆ ಸುಬ್ಬಣ್ಣನವರಲ್ಲಿ ಸಾಂಸ್ಕೃತಿಕವಾಗಿ ನಿರ್ವಚನೆಗೆ ಒಳಗಾಗಿದೆ. ಮನುಷ್ಯ-ಮನುಷ್ಯ ಸಂಬಂಧಗಳ, ರಾಷ್ಟ್ರ -ರಾಷ್ಟ್ರಗಳ, ಸಂಸ್ಕೃತಿ-ಸಂಸ್ಕೃತಿಗಳ ಸಂಬಂಧದ ಮಹತ್ವದ ವಿಷಯವಾಗಿ ಅವರನ್ನು ಬಾಧಿಸಿದೆ. ಪರಸ್ಪರ ಮನುಷ್ಯರ ನಡುವೆಯಾಗಲಿ ಅಥವಾ ಪರಸ್ಪರ ಸಂಸ್ಕೃತಿಗಳ ನಡುವೆಯಾಗಲಿ ಶ್ರೇಷ್ಠ ಮತ್ತು ಕನಿಷ್ಠ ಎಂಬ ವಿಭಾಗೀಕರಣವು ಅವರನ್ನು ನೈತಿಕವಾಗಿ ಕಂಗೆಡೆಸಿದೆ. ಸುಬ್ಬಣ್ಣನವರು ಈ ರೀತಿ ಆಲೋಚಿಸಲು ಕಾರಣವೇನು ಎಂದು ಯೋಚಿಸಹೊರಟರೆ, ಥಟ್ಟನೆ ಅವರು ತಮ್ಮ ಬಾಲ್ಯದ ಬಗ್ಗೆ ಹೇಳಿಕೊಂಡ ಮಾತುಗಳು ನೆನಪಾಗುತ್ತವೆ.

"ಈ ಹಂತದಲ್ಲಿ ನನ್ನ ಸ್ವಂತದ್ದೇ ಸಂಕಟ ಹೇಳುಕೊಳ್ಳುವುದು ಸೂಕ್ತವಾದೀತು. ನನ್ನ ಬಾಲ್ಯದಿಂದ ಪ್ರಾರಂಭವಾಗುವ ಕಥೆ ಇದು. ನಾನು ಹುಟ್ಟಿದ್ದು 'ಹವ್ಯಕ' ಎಂಬ ಬ್ರಾಹ್ಮಣ ಉಪಜಾತಿಯಲ್ಲಿ. . . ಈ ಕಾಲಕ್ಕೆ ಸಾಕಷ್ಟು ಉದಾರ ಮನಸ್ಕರಾಗಿದ್ದ ನನ್ನ ಹಿರಿಯರು ಕೂಡ ಜಾತಿಗಳಲ್ಲೆಲ್ಲಾ ಶ್ರೇಷ್ಠವಾದದ್ದು ಬ್ರಾಹ್ಮಣ ಜಾತಿ, ಅವರಲ್ಲೂ ಶ್ರೇಷ್ಠರೆಂದರೆ ಈ ಹವ್ಯಕರು ಎಂದೇ ನಂಬಿದ್ದರು. ಊರಲ್ಲಿರುವ ಉಳಿದ ಪ್ರತ್ಯೇಕತೆಯಲ್ಲಿ ನಾವು ಬೆಳೆಯಬೇಕಾಯ್ತು. . . ಶ್ರೇಷ್ಠತೆಯ ವ್ಯಸನ ನಮ್ಮಲ್ಲಿ ಎಂಥದೊಂದು ನಿಷ್ಕರುಣ ಸಾಮಾಜಿಕ ಜಾತಿ ಸಂಪ್ರದಾಯವನ್ನು ಭದ್ರವಾಗಿ ಸ್ಥಾಪಿಸಿಬಿಟ್ಟಿತೋ ಅದರ ವಾರಸುದಾರಿಕೆಯಿಂದ ಪೂರ್ತಾತಪ್ಪಿಸಿಕೊಳ್ಳುವುದು ಮಾತ್ರ ಬಲು ಕಷ್ಟವಾಗಿತ್ತು. ಕಷ್ಟವೇನು, ದುಸ್ಸಾಧ್ಯವಾಗಿತ್ತು. ಈಗ, ಇವತ್ತಿನ ಈ ಕ್ಷಣದಲ್ಲಿ ಕೂಡಾ ಅದರಿಂದ

ಮುಕ್ತವಾಗಲಿಕ್ಕೆ ಸಾಧ್ಯವಾಗದ ನಾನು, ನನ್ನಂಥವರು ಒಳಗೇ ಜ್ವರ ತಪ್ತರಾಗಿ ನರಳುತ್ತೇವೆ. ಹೊರಗಣ ನಡವಳಿಕೆ ತೊದಲುತ್ತದೆ."[೧೮]

ಶ್ರೇಷ್ಠತೆಯ ಬಗೆಗೆ ಸುಬ್ಬಣ್ಣನವರಿಗಿದ್ದ ನಿಷ್ಕಾಮತೆಯನ್ನು ಬಾಲ್ಯದಿಂದಲೇ ಗುರುತಿಸಬಹುದು. ಶ್ರೇಷ್ಠತೆಯನ್ನು ಸಹಜವಾದ ಗುಣವನ್ನಾಗಿ ಅವರು ಒಪ್ಪಿಕೊಳ್ಳುತ್ತಾರೆ. ಆದರೆ ಅಪೇಕ್ಷಣೀಯವಾಗಿ, ಗೌರವಾರ್ಹವಾಗಿ ಅದನ್ನು ನಂಬಿ ಸಾಧಿಸುವುದನ್ನು ತಿರಸ್ಕರಿಸುತ್ತಾರೆ.

ವಿಕೇಂದ್ರೀಕರಣಕ್ಕೆ ಬದ್ಧತೆಯುಳ್ಳ ಸಮಾಜವಾದಿಗಳಾದ ಸುಬ್ಬಣ್ಣನವರು ಮೊದಲಿನಿಂದಲೂ ಸಮ ಸಮಾಜದ ವ್ಯವಸ್ಥೆಗೆ ಹಾತೊರೆದವರು. ವಿಕೇಂದ್ರಿತ ಸಾಮಾಜಿಕ ವ್ಯವಸ್ಥೆಯು ಸಮಾನತೆ ಸ್ವಾತಂತ್ರ್ಯಗಳ ಮೌಲ್ಯಗಳನ್ನು ಪ್ರತಿಬಿಂಬಿಸಲು ಸಾಧ್ಯವಾಗುವ ಒಂದು ಸಾಧನ ಎಂದು ಅವರು ನಂಬಿದ್ದರು. ಯಾವ ಕ್ಷೇತ್ರದಲ್ಲೇ ಆಗಲಿ ಶ್ರೇಷ್ಠತೆಯ ಅತಿರೇಕತೆ, ತೆವಲು ವಿಜೃಂಭಿಸುವುದನ್ನು ಖಂಡಿಸುತ್ತಾರೆ. 'ಸೌಂದರ್ಯ ಸ್ಪರ್ಧೆ'ಯನ್ನು ಪ್ರತಿಭಟಿಸುವುದೇತಕ್ಕೆ?' ಎಂಬ ಲೇಖನದಿಂದ ಈ ರೀತಿಯ ಖಂಡನೆಯನ್ನು ಗುರುತಿಸಬಹುದು.

ಪ್ರತಿಭಟಿಸುವುದೇತಕ್ಕೆ ಎಂಬ ಪ್ರಶ್ನೆಯನ್ನು ತಮಗೆ ತಾವೇ ಸ್ವತಃ ಕೇಳಿಕೊಂಡು ತಮ್ಮ ವಿರೋಧಕ್ಕೆ ತಕ್ಕ ಸಮರ್ಥನೆಯನ್ನು ಕೊಡುತ್ತಾರೆ. ಅವರಿಗೆ, 'ಇದು ಆರ್ಥಿಕ ಶೋಷಣೆಯ ಸಾಧನವಾಗಿದೆ ಮತ್ತು ಎರಡನೆಯದಾಗಿ ಇದು ಸಾಂಸ್ಕೃತಿಕ ವಿನಾಶಕ್ಕೆ ಕಾರಣವಾಗಿದೆ' ಪ್ರಜಾಪ್ರಭುತ್ವದ ತತ್ವಗಳನ್ನು ಪ್ರತಿಪಾದಿಸುತ್ತ, ಸರಕಾರದ ತಟಸ್ಥತೆ ಅದರ ಬೆಂಬಲ ಹಾಗೂ ಜಾಗತಿಕ 'ಸೌಂದರ್ಯ ಸ್ಪರ್ಧೆ'ಯಲ್ಲಿ ತಳುಕು ಹಾಕಿಕೊಂಡಿರುವ ವಾಣಿಜ್ಯ ಆಕ್ರಮಣ ಎರಡೂ ನೆಲೆಗಳಲ್ಲಿ ತರಾಟೆಗೆ ತೆಗೆದುಕೊಳ್ಳುತ್ತಾರೆ. ಆರ್ಥಿಕ ಶೋಷಣೆಯ ವಿವಿಧ ಮುಖಗಳ ಅನಾವರಣ ಮಾಡುತ್ತಲೇ, 'ಸೌಂದರ್ಯ' ಹೆಸರಿನಲ್ಲಿ ನಡೆಯುವ ದಂಧೆ, ವಂಚನೆ, ಲಾಭಕೋರತನ ಮತ್ತು ಕೊಳ್ಳುಬಾಕ ಸಂಸ್ಕೃತಿಯನ್ನು ಟೀಕಿಸುತ್ತಾರೆ.

ಗಾಂಧೀಜಿಯ ಮೂಲಕ ಮತ್ತೊಂದು ನೆಲೆಯಲ್ಲಿ ಮಾತನಾಡುತ್ತಾರೆ. ಗಾಂಧೀಜಿಯು ಸ್ಪರ್ಧೆ–ಪ್ರಗತಿಗಳಿಗೆ ವಿರುದ್ಧವಾದ 'ಸಹಕಾರ–ಸರ್ವೋದಯ'ಗಳ ಸೂತ್ರವನ್ನು ಪ್ರತಿಪಾದಿಸಿದ್ದು, 'ಸಮತ್ವ'ದ ದೃಷ್ಟಿಕೋನದಿಂದಲೇ. ಪ್ರಜಾಪ್ರಭುತ್ವದಂತಹ ವ್ಯವಸ್ಥೆಯಲ್ಲಿ 'ಸರ್ವರು ಸಮಾನರು' ಎಂಬ ಮೂಲಭೂತ ಪರಿಕಲ್ಪನೆಯ ಧೋರಣೆಯು ಅತ್ಯನಿವಾರ್ಯವಾದುದು. ಸ್ಪರ್ಧೆಯು ಹೇಗೆ ಸಾಂಸ್ಕೃತಿಕ ಆಕ್ರಮಣ ನಡೆಸ ಬಲ್ಲವೆಂಬುದನ್ನು ಮತ್ತು ಸೌಂದರ್ಯ ಸ್ಪರ್ಧೆಯು ವ್ಯಾಪಾರದೊಂದಿಗೆ ತಳುಕು ಹಾಕಿಕೊಂಡಿರುವ ಕ್ರಮವನ್ನು ಸುಬ್ಬಣ್ಣನವರು ವಿವರಿಸುತ್ತಾರೆ. ಮುಂದುವರಿದು ಹೇಳುತ್ತಾರೆ : "'ಸೌಂದರ್ಯ'ವೆಂಬುದು ಹದಿಹರೆಯದ (ವಯೋಮಿತಿಯ) ಹೆಣ್ಣಿನ ಅಳತೆ ತೂಕಗಳಲ್ಲಿ, ನುಡಿ ನಗೆ ನವಿರುಗಳ ಕರಾರುವಕ್ಕು ಮಾಪನದಲ್ಲಿ ಕೈಗೆ ಸಿಗುವ ವಸ್ತು ಮತ್ತು ಇಂಥ ಮಾಪನದಿಂದ ಯಾವಳಲ್ಲಿ ವಿಶ್ವದಲ್ಲಿ ಗರಿಷ್ಠ ಬೇರೀಜು ಮೊಬಲಗಿನ ಸೌಂದರ್ಯವುಂಟೆಂಬುದನ್ನು ಕರಾರುವಕ್ಕಾಗಿ ತೀರ್ಮಾನಿಸಲು ಸಾಧ್ಯ ಎಂದು ಈ ಸ್ಪರ್ಧೆಯು ನಮ್ಮನ್ನು ನಂಬಿಸುತ್ತದೆ. ಅಮೂರ್ತ ಆದರ್ಶಗಳೆಲ್ಲವನ್ನೂ ನಮ್ಮ ಮನಸ್ಸಿನಿಂದ ಗುಡಿಸಿ ಹೊರ ಹಾಕಿ ತಲೆಯನ್ನು ತೊಳೆದಿಡುತ್ತದೆ. ನಮ್ಮನ್ನು ಸುಲಭ, ಆಕ್ರಮಣ, ಸಾಧ್ಯರನ್ನಾಗಿ ಮಾಡುತ್ತದೆ."[೧೯]

---

೧೮ ಅದೇ, ಪು.೧೪೪.

೧೯ ಅದೇ, ಪು.೨೧೦.

ಈ ಲೇಖನವನ್ನು ಓದುತ್ತಿದ್ದರೆ, ಲೋಹಿಯಾರವರ 'ಸೌಂದರ್ಯ ಮತ್ತು ವೈಬಣ್ಣ' ಹಾಗೂ ಬೇಂದ್ರೆಯವರ 'ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ, ಕಣ್ಣಿಗೂ ಕಣ್ಣಾಗಿಹ ಮನಸ್ಸಿನ ತುತ್ತು. . .' ಎಂಬ ಕವನದ ಸಾಲುಗಳು ನೆನಪಾಗಿ ನಮ್ಮ ಪ್ರಜ್ಞೆಯನ್ನು ವಿಕಾಸಗೊಳಿಸುತ್ತವೆ. ಒಟ್ಟಿನಲ್ಲಿ ಸ್ಪರ್ಧೆಯೆಂಬುದು ಮೂಲತಃ 'ಆಕ್ರಮಣ'ವನ್ನು ಪ್ರತಿಪಾದಿಸುವ ಮತ್ತು ಅಧಿಕೃತಗೊಳಿಸುವ ಸಾಧನವಾಗಿದೆ, ಅಸ್ಪೃಶ್ಯತೆಯ ಹಿನ್ನೆಲೆಯಲ್ಲಿಯೂ ನಾವು ಸೌಂದರ್ಯಸ್ಪರ್ಧೆಯನ್ನು ಅರ್ಥೈಸಿಕೊಳ್ಳಬೇಕಿದೆ.

ಇದೇ ಸಂದರ್ಭದಲ್ಲಿ ಮ್ಯಾಗಸೇಸೆ ಪ್ರಶಸ್ತಿಯನ್ನು ಸ್ವೀಕರಿಸಿದ ಬಳಿಕ ಸುಬ್ಬಣ್ಣನವರು ಆಡಿದ ಮಾತುಗಳನ್ನು ಇಲ್ಲಿ ಹೇಳಬೇಕು. 'ಸ್ಪರ್ಧೆಯು ಅತ್ಯನಿವಾರ್ಯವಾಗಿ ಅಸೂಯೆ, ದ್ವೇಷ ಮತ್ತು ಹಿಂಸೆಗಳನ್ನು ಹುಟ್ಟಿಸುತ್ತದೆ' ಎಂದು ಭಾಷಣದಲ್ಲಿ ಹೇಳುತ್ತಾರೆ. ಸ್ಪರ್ಧೆಯು ಶ್ರೇಷ್ಠತೆಯ ಮತ್ತೊಂದು ಮುಖವೆ ಆಗಿದೆ. ಪ್ರತಿಸ್ಪರ್ಧಿಯನ್ನು ಸೃಷ್ಟಿಸುವುದರ ಮೂಲಕ ಶ್ರೇಣೀಕರಣವನ್ನು ಪ್ರತಿಪಾದಿಸುತ್ತಾ, 'ಸರ್ವಸ್ವ' ಎಂಬ ಪರಿಕಲ್ಪನೆಯನ್ನೇ ನಾಶಗೊಳಿಸಿ ಬಿಡುವುದರಿಂದ ಅದು ಕಂಟಕವಾಗುತ್ತದೆ. ಇನ್ನೊಬ್ಬರನ್ನೂ 'ಸಹ' ಎಂದು ತಿಳಿಯದೆ 'ಅನ್ಯ' ಎಂದು ಭಾವಿಸುವ 'ಶ್ರೇಷ್ಠತೆ'ಯೂ ವ್ಯಸವವೂ ಹೌದು; ಅಪಾಯಕಾರಿಯೂ ಹೌದು.

ಐತಿಹಾಸಿಕವಾಗಿಯೂ, ಸಾಮಾಜಿಕ ಮತ್ತು ಸಂಸ್ಕೃತಿಗೆ ಸಂಬಂಧಪಟ್ಟಂತೆ ಸುಬ್ಬಣ್ಣನವರನ್ನು ನೈತಿಕವಾಗಿ ಬಾಧಿಸಿದೆ. ನೈರ್ಮಲ್ಯತೆಯ ತುಟ್ಟ ತುದಿಯಲ್ಲಿ ಜೀವನ ನಡೆಸಲು ಹೊರಟ ಮೇಲ್ವರ್ಗದ ನಡಾವಳಿಯನ್ನು ಕಂಡು ಅವರು ಆತಂಕಗೊಳ್ಳುತ್ತಾರೆ (ಜಾತೀಯತೆಯನ್ನು ಪೋಷಿಸುವ ಸಂಘಟನೆಗಳನ್ನು ಕುರಿತು ಬರೆದ 'ಹವ್ಯಕ ಸಮ್ಮೇಳನ: ಒಂದು ಹೇಳಿಕೆ' ಎಂಬ ಲೇಖನವನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದು) ಮತ್ತು ಕೆಳವರ್ಗದವರ ಪರ ತಮ್ಮ ನಿಲುವನ್ನು ದೃಢವಾಗಿ ಮಂಡಿಸುತ್ತಾ, ಖಚಿತಗೊಳಿಸುತ್ತಾರೆ. 'ದಲಿತರ ಮೇಲೆ ಹಲ್ಲೆ: ಒಂದು ಪ್ರತಿಕ್ರಿಯೆ' ಎಂಬ ಲೇಖನದಲ್ಲಿ ಸುಬ್ಬಣ್ಣನವರ ಒಳತೋಟಿ ಈ ರೀತಿ ವ್ಯಕ್ತಗೊಂಡಿದೆ.

"ತಲೆಯ ಮೇಲೆ ಮಲ ಹೊರುವ ದೈನ್ಯ ಲಹರಿ ಜನರಿಗೆ ಅಸಹ್ಯ ಹೇವರಿಕೆ ಕ್ರೋಧ ತರಬೇಕು. ಹಾಗೆ, ಅದನ್ನು ತನ್ನ ಸುತ್ತ ಕಾಣುವ ಉತ್ತಮರಿಗೆ ತಮ್ಮ ಕ್ಷುದ್ರ ಔನ್ನತ್ಯದ ಬಗ್ಗೆ ಕೂಡ ಅಸಹ್ಯ ಹೇವರಿಕೆ ಹುಟ್ಟಬೇಕು. ತಲೆಯ ಮೇಲೆ ಮಲ ಹೊರುವುದನ್ನು ಕಂಡ ಉತ್ತಮನಿಗೆ ತನ್ನ ಊಟದ ತುತ್ತನ್ನೆತ್ತುವಾಗ ಅದು ಮಲವಾಗಿ ಕಾಣಬೇಕು. ಅಲ್ಲಿಗೆ ಆತ ಮನುಷ್ಯನಾಗುತ್ತಾನೆ. ಇಂಥದೊಂದು ಮಾನಸಿಕ ಸ್ಥಿತಿಯನ್ನು ಉಂಟುಮಾಡುವ ಆಂತರಿಕ ವ್ಯಕ್ತಿತ್ವವೇ ಅಂತಿಮವಾಗಿ ಸಮಾಜದಲ್ಲಿ ಸಮಾನತೆಯನ್ನು ಖಾಯಂ ಸ್ಥಾಪಿಸುವಂಥದು."[೧೭]

ಅಂತಿಮವಾಗಿ ಮನುಷ್ಯ –ಮನುಷ್ಯರ ನಡುವೆ ಇಂತಹ ವಿವೇಕ ಹೊರಡದು ಹೊರತು ಸಮಾನತೆ ಸಾಧ್ಯವಿಲ್ಲ. ಸಮ ಸಮಾಜದ ವ್ಯವಸ್ಥೆಗಾಗಿ ತುಡಿಯುವ ಇಂತಹ ಮಾನವೀಯ ಕಳಕಳಿಯುಳ್ಳ ಸುಬ್ಬಣ್ಣನವರಿಗೆ 'ಶ್ರೇಷ್ಠತೆ'ಯು ವ್ಯಸನವಾಗಿ ಕಂಡಿರುವುದು ಈ ಕಾರಣದಿಂದಲೆಯೆನಿಸುತ್ತದೆ. ಐತಿಹಾಸಿಕವಾಗಿ ಮನುಷ್ಯವರ್ಗವೇ ನಾಚಿಕೆಪಡುವ ಇಂತಹ ಹೀನ ವ್ಯವಸ್ಥೆಯನ್ನು ಮನಗಂಡೆ. 'ಇವತ್ತು ಬ್ರಾಹ್ಮಣನಿಗೆ

---

[೧೭] ಅದೇ, ಪು.೬೦.

ಬೇಕಾದುದು ವಿನಯ, ದಲಿತನಿಗೆ ಬೇಕಾದುದು ಅಹಂಕಾರ' ಎಂದು ಹೇಳುತ್ತಾರೆ. 'ವಿನಯ' ಮತ್ತು 'ಅಹಂಕಾರ' ಎರಡು ಪರಸ್ಪರ ಆತ್ಮೀಯವಾಗುವುದರ ಮೂಲಕ ಹತ್ತಿರವಾಗಬೇಕು ಮತ್ತು ಹೀಗೆ ಹತ್ತಿರವಾಗುವುದರ ಮೂಲಕ 'ಸಮತ್ವ' ಕಾಪಾಡಿಕೊಳ್ಳಬೇಕು ಎಂಬುದು ಸುಬ್ಬಣ್ಣನವರ ದಿಟ್ಟ ನಿಲುವಾಗಿದೆ.

ಪ್ರಶಸ್ತಿಯನ್ನು ಸ್ವೀಕರಿಸುವಲ್ಲಿಯೂ ಸುಬ್ಬಣ್ಣನವರು ಕೆಲವು ತಾತ್ವಿಕತೆಗೆ ಬದ್ಧರಾಗಿದ್ದರೆನಿಸುತ್ತದೆ. ಇದನ್ನು 'ಕಾಲಿದಾಸ ಸನ್ಮಾನ : ಪ್ರತಿಸ್ಪಂದನ'ದಲ್ಲಿ ನಿಚ್ಚಳವಾಗಿ ಗುರುತಿಸಬಹುದು. 'ಕಾಲಿದಾಸ– ಕಬೀರ – ತುಲಸೀ' ಮೊದಲಾದ ಪ್ರಶಸ್ತಿಗಳನ್ನು ಮೆಚ್ಚಿಕೊಳ್ಳುತ್ತ "ನಮ್ಮ ಅಸ್ತಿತ್ವದ ವೈವಿಧ್ಯ ಮತ್ತು ಏಕತೆಗಳೆರಡನ್ನೂ ಏಕಕಾಲಕ್ಕೆ ಸರಿಸಮಾನವಾಗಿ ಪರಿಭಾವಿಸುವ ಮನೋಧರ್ಮವೇ ನಮ್ಮ ಪ್ರಜಾತಂತ್ರದ ಮೂಲ ಅಸ್ತಿವಾರ ಎಂಬುದು ನನ್ನ ನಂಬಿಕೆ. ಅಂದರೆ ಈ ಪ್ರಶಸ್ತಿಗಳು ನಮ್ಮ ಪ್ರಜಾತಂತ್ರಕ್ಕೆ ಅತ್ಯಗತ್ಯವಾದ ಒಂದು ಮನೋಧರ್ಮವನ್ನು ದೃಢೀಕರಿಸುತ್ತವೆ. ಈ ಕಾರಣದಿಂದ ನನಗೆ ಈ ಪ್ರಶಸ್ತಿಯು ವಿಶೇಷ ಸಂತೋಷವನ್ನು ಕೊಟ್ಟಿದೆ"[೧೮] ಎಂದು ಹೇಳಿಕೊಳ್ಳುತ್ತಾರೆ. ಪದ್ಮಶ್ರೀ ಪ್ರಶಸ್ತಿಯು ಬಂದ ಸಂದರ್ಭದಲ್ಲಿ ಅದನ್ನು ನಿರಾಕರಿಸುತ್ತಾರೆ. ನೊಬೆಲ್ ಪ್ರಶಸ್ತಿಯನ್ನು ತಿರಸ್ಕರಿಸಿದ ಫ್ರೆಂಚ್ ತತ್ವಜ್ಞಾನಿ ಹಾಗೂ ಸಾಹಿತಿ ಜೀನ್‌ಪಾಲ್ ಸಾರ್ತ್ರ್ ಇಲ್ಲಿ ನೆನಪಿಗೆ ಬರುತ್ತಾರೆ. ಶ್ರೇಣೀಕರಣ ಮತ್ತು ಶ್ರೇಷ್ಠತೆಯನ್ನು ಪ್ರತಿಪಾದಿಸುವ ನೊಬೆಲ್ ಪ್ರಶಸ್ತಿಯು, ಸಮಾನತೆ ಮತ್ತು ಸ್ವಾತಂತ್ರ್ಯಗಳಿಗೆ ವಿರುದ್ಧವಾದದ್ದು ಎಂದು ನಂಬಿಕೊಂಡಿದ್ದ ಸಾರ್ತ್ರ್, 'ನನ್ನ ಬರವಣಿಗೆಯ ಬಗ್ಗೆ ಒಂದು ಮನುಷ್ಯಕ್ರಿಯೆಯಾಗಿ ನನಗೆ ಹೆಮ್ಮೆಯಿದೆ' ಎಂದು ಹೇಳಿಕೊಳ್ಳುತ್ತಾರೆ. ಸುಬ್ಬಣ್ಣ ಮೆಚ್ಚುವ ಹಲವು ಚಿಂತಕರಲ್ಲಿ ಸಾರ್ತ್ರ್ ಕೂಡ ಒಬ್ಬರು ಎಂಬುದನ್ನು ನೆನೆಯಬೇಕು.

ಒಟ್ಟಾರೆ, ಎಲ್ಲ ರಂಗಗಳ ಸಂದರ್ಭದಲ್ಲೂ, ಒಟ್ಟು ಇಡೀ ಸಂಸ್ಕೃತಿಗೆ ಸಂಬಂಧಿಸಿದಂತೆ 'ಶ್ರೇಷ್ಠತೆ'ಯನ್ನು ಸೂಕ್ಷ್ಮವಾಗಿ ಗ್ರಹಿಸಿಕೊಳ್ಳುತ್ತಾರೆ. ಶ್ರೇಷ್ಠತೆಯ ಆದರ್ಶವನ್ನು ನಿರಾಕರಿಸದೆ, ಅದರ ವ್ಯಸನ, ಸ್ವಾರ್ಥಪರಾಕಾಂಕ್ಷೆಗಳು ಮತ್ತು ಅದರ ವಿಕಾರಗಳ ವಿರುದ್ಧ ಎಚ್ಚರವಿರುವಂತೆ ನಮ್ಮನ್ನು ಒತ್ತಾಯಿಸುತ್ತಾರೆ. ಅಲ್ಲದೆ 'ಶ್ರೇಷ್ಠತೆ'ಯನ್ನು ವೈಯಕ್ತಿಕ ನೆಲೆಯಿಂದಲೂ ವಿಮರ್ಶಿಸಿಕೊಳ್ಳುತ್ತಾರೆಯೆನ್ನುವುದು ಸುಬ್ಬಣ್ಣನವರ ವಿಶಿಷ್ಟತೆಯಾಗಿದೆ.

**ನೀನಾಸಂ :**

ಸುಬ್ಬಣ್ಣನವರ ಒಟ್ಟು ತಾತ್ವಿಕ ಚಿಂತನೆಗಳು ಪ್ರಜಾಪ್ರಭುತ್ವದ ನೆಲೆಯಲ್ಲಿಯೇ ಹರಹಿಕೊಂಡಿದೆ. ನ್ಯಾಯಬದ್ಧವಾದ ಸರ್ವರಿಗೂ ಸಮಾನತೆಗಳುಳ್ಳ ಸ್ವಾಸ್ಥ್ಯ ಆರೋಗ್ಯ ಚಿಂತನಾಶೀಲ ಸಮಾಜವನ್ನು ಕಟ್ಟುವ ಪ್ರಧಾನ ಕಾಳಜಿಯ ಸುತ್ತಲೆ ನೇಯ್ದುಕೊಂಡಿವೆ. ಸ್ವಾತಂತ್ರ್ಯೋತ್ತರ ನಂತರ ೧೯೪೯ರಲ್ಲಿ ಹವ್ಯಾಸಿ ನಾಟಕ ತಂಡವಾಗಿ ಆರಂಭವಾದ ನೀನಾಸಮ್‌ನ್ನು ಪ್ರಾಯಶಃ ಈ ಹಿನ್ನೆಲೆಯಲ್ಲಿ ಗ್ರಹಿಸಿಕೊಳ್ಳಬೇಕಾದುದು ಉಚಿತವೆನಿಸುತ್ತದೆ.

ನೀನಾಸಮ್‌ನ ಸ್ವರೂಪದ ಕುರಿತು ಸುಬ್ಬಣ್ಣನವರು ಒಂದೆಡೆ ಹೀಗೆ ಹೇಳಿಕೊಳ್ಳುತ್ತಾರೆ: "ನೀನಾಸಮ್ ಎಂಬುದು ನಿಜವಾಗಿ, ಸದ್ಯ ನಮ್ಮ ರಾಜ್ಯದಲ್ಲಿ ನಡೆದಿರುವ ಅನೇಕಾನೇಕ ಗ್ರಾಮೀಣ ಸಾಂಸ್ಕೃತಿಕ

---

೧೮ ಅದೇ, ಪು.೨೪೩.

ಚಟುವಟಿಕೆಗಳ ಹಾಗೂ ನಮ್ಮಲ್ಲಿನ 'ಪರಿಸರ-ದಲಿತ -ರೈತ-ಮಹಿಳಾ' ಇತ್ಯಾದಿ ಕಿರುಚಳುವಳಿಗಳ ಬಲು ಸಣ್ಣ ಅಭಿವ್ಯಕ್ತಿ ಅಂತ ಭಾವಿಸಬೇಕು; ನೀನಾಸಮ್‌ನ್ನು 'ಒಂದು ಆದರ್ಶ ಕನಸಿನ ಸಾಧನೆಯ ಪರಿ' ಎನ್ನುವಂತೆ ನೋಡದೆ, ಇವತ್ತಿನ ಕನ್ನಡ -ಭಾರತಗಳ ಆಂತರಿಕ ಕುದಿತವು ಹೊರಗಾಣಿಸಿರುವ ಒಂದು ಕಿರು-ಕಿರು-ಕಿರು ಅಭಿವ್ಯಕ್ತಿ ಅಂತ ನೋಡಬೇಕು' ಅದು ನಮ್ಮ ಆಸೆ.''[೧೯]

ಮೇಲಿನ ಮಾತುಗಳನ್ನು ಗಮನಿಸಿದರೆ ನೀನಾಸಂ ಕೇವಲ 'ತಿರುಗಾಟ' ಮತ್ತು 'ರಂಗಭೂಮಿ' ಚಟುವಟಿಕೆಗಳಿಗಷ್ಟೇ ತನ್ನನ್ನು ಒಡ್ಡಿಕೊಂಡಿಲ್ಲವೆನ್ನುವುದು ತಿಳಿಯುತ್ತದೆ. ನೀನಾಸಮ್ ಕನ್ನಡ - ಭಾರತ ಸಂಸ್ಕೃತಿಯ ಪ್ರಮುಖ ಅಂಗವಾಗಿ ರೂಪುಗೊಂಡಿದೆ. ಆದ್ದರಿಂದಲೇ ನೀನಾಸಮ್ ಪ್ರಮುಖ ಸಂಘಟಕ ನೇತರಾರರಾದ ಸುಬ್ಬಣ್ಣನವರು 'ನೀನಾಸಮ್‌ನನ್ನು ಕಿರುಚಳುವಳಿಗಳ ಸಣ್ಣ ಅಭಿವ್ಯಕ್ತಿ' ಎಂದು ಕರೆದಿರುವುದು. ವಿಕೇಂದ್ರೀಕರಣದ ತತ್ವವನ್ನೇ ಅವರು ಸಾಂಸ್ಕೃತಿಕ ಸಂಸ್ಥೆಯಾದ ನೀನಾಸಮ್‌ಗೆ ಮುಖ್ಯ ತಳಹದಿಯನ್ನಾಗಿ ರೂಪಿಸಿಕೊಂಡರು ಮತ್ತು ಸಮುದಾಯದೊಳಗೆ (ಸ್ಥಳೀಯತೆ) ಬೆರೆತು ಇಡೀ ವಿಶ್ವದ ಜೊತೆ ಅನುಸಂಧಾನ ಮಾಡಿಕೊಳ್ಳುತ್ತ, ಜ್ಞಾನವನ್ನು ಪಡೆದುಕೊಳ್ಳಲು ಪ್ರಯತ್ನಪಟ್ಟರು.

'ನೀನಾಸಂ ರಂಗಶಿಕ್ಷಣ ಕೇಂದ್ರ'ವು ೧೯೮೦ರಲ್ಲಿ ತಾತ್ತ್ವಿಕವಾಗಿ ದೆಹಲಿಯಲ್ಲಿರುವ 'ರಾಷ್ಟ್ರೀಯ ನಾಟಕ ಶಾಲೆ'ಯ ಬುನಾದಿಯ ಮೇಲೆ ರೂಪುಗೊಂಡಿತು. ಆದರೆ ಎನ್.ಎಸ್.ಡಿ.ಗಿಂತ ಭಿನ್ನವಾಯಿತು. ಸಾಮಾನ್ಯವಾಗಿ 'ರಾಷ್ಟ್ರೀಯ ನಾಟಕ ಶಾಲೆ'ಯಲ್ಲಿ ತರಬೇತಿ ಪಡೆದ ಪದವೀಧರರು ನಗರಗಳಿಗೆ ಹೆಚ್ಚಾಗಿ ವಲಸೆ ಹೋಗುತ್ತಾರೆ. ಆದರೆ ನೀನಾಸಮ್ ರಂಗಶಿಕ್ಷಣ ಕೇಂದ್ರದಲ್ಲಿ ತರಬೇತಿ ಹೊಂದಿದವರು. ಪುನಃ ತಮ್ಮ ತಮ್ಮ ಹಳ್ಳಿಗಳಿಗೆ ತೆರಳಿ, ಅಲ್ಲಿಯೆ ರಂಗಭೂಮಿ ಚಟುವಟಿಕೆಗಳನ್ನು ಮುನ್ನಡೆಸಿಕೊಂಡು ಹೋಗುತ್ತಾರೆ. ಈ ರೀತಿ ತಮ್ಮ ಸ್ವಗ್ರಾಮಗಳಿಗೆ ಮತ್ತೆ ಹೋಗಿ ಸೇವೆ ಸಲ್ಲಿಸುವ ಪರಿಯಿದೆಯಲ್ಲ, ಅದು ನೀನಾಸಮ್‌ನ ತಾತ್ವಿಕ ಕಾಳಜಿಗಳಲ್ಲೊಂದು. ಇಂತಹ ಮನಸ್ಸುಗಳ ಹಿಂದೆ ಸುಬ್ಬಣ್ಣನವರ ಕಾಣ್ಕೆ, ದೂರದರ್ಶಿತ್ವ ಇದೆಯೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಸುಬ್ಬಣ್ಣನವರು ಯಾವುದೇ ಚಟುವಟಿಕೆಗಳನ್ನು ಕೈಗೊಂಡರು ಅಲ್ಲಿ ಗಾಂಧೀಜಿಯವರ 'ಗ್ರಾಮಸ್ವರಾಜ್ಯ'ದ ಕನಸು ಕಾರ್ಯತತ್ಪರವಾಗಿರುತ್ತದೆ. ಹಾಗಾಗೆ ನೀನಾಸಮ್ ನಿಜಕ್ಕೂ ಹೇಗೆ ಭಿನ್ನ ಎಂಬುದರ ಬಗೆಗೆ ಮಾತನಾಡುತ್ತ ವಿಮರ್ಶಕರಾದ ರೂಸ್ತುಂ ಭರೂಚರವರು, ''ಅವರ ವೈಯಕ್ತಿಕ ಒಲವುಗಳು ಸಾಮಾಜಿಕ ಕ್ರಿಯೆಗಳಾಗಿ ರೂಪು ತಳೆದವು. ಇದು ಭಾರತದ ಬಹಳಷ್ಟು ರಂಗಕರ್ಮಿಗಳ ಪ್ರವೃತ್ತಿಗಿಂತ ತುಂಬ ಭಿನ್ನವಾಗಿದ್ದುದು''[೨೦] ಎಂದು ಹೇಳುತ್ತಾರೆ.

ಸುಬ್ಬಣ್ಣನವರು ಕೃಷಿಯನ್ನು ತಮ್ಮ ಕಾಯಕ ವೃತ್ತಿಯನ್ನಾಗಿ ಆಯ್ಕೆ ಮಾಡಿಕೊಂಡು ಯಾವುದೋ ಒಂದು ಕಿರು ಹಳ್ಳಿಯಲ್ಲಿ ನೆಲೆಸಿ ಗ್ರಾಮದುದ್ಧಾರಕ್ಕಾಗಿ ಶ್ರಮಿಸಿದರು. ತಮ್ಮ ಕಾರ್ಯ ಚಟುವಟಿಕೆಗಳಿಗೆ ಅನುಗುಣವಾಗಿ 'ನೀನಾಸಮ್', 'ಅಕ್ಷರ ಪ್ರಕಾಶನ' ಮತ್ತು 'ರಂಗಭೂಮಿ' ಮೊದಲಾದ ಸೃಜನಶೀಲ ಕ್ಷೇತ್ರಗಳನ್ನು ಸ್ಥಾಪಿಸಿಕೊಂಡರು. ಆ ಮೂಲಕ ಸಮುದಾಯದ ಪ್ರಜ್ಞೆಯನ್ನು ಜಾಗೃತಗೊಳಿಸಲು ಶ್ರಮಿಸಿದರು.

---

೧೯ ಅದೇ, ಪು.೨೪೪.

೨೦ ರಂಗಧಾಮ, ಶ್ರೀ ಕೆ.ವಿ. ಸುಬ್ಬಣ್ಣ ಅಭಿನಂದನ ಗ್ರಂಥ, ಸಂಪಾದಕ: ಬಿ. ಮಹಾಬಲೇಶ್ವರ ಭಟ್ಟ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೫, ಪು.೧೨೭.

ಗ್ರಾಮ ಉದ್ಧಾರವಾಗದ ಹೊರತು ರಾಷ್ಟ್ರ ಪ್ರಗತಿ ಅಸಾಧ್ಯ ಎಂಬ ಗಾಂಧೀಜಿಯವರ ತತ್ವಕ್ಕೆ ಬದ್ಧವಾಗಿರುವ ಸುಬ್ಬಣ್ಣನವರು, ನಗರಾಭಿವೃದ್ಧಿಗೆ ವಿರುದ್ಧವಾದ ಚಲನೆಯಲ್ಲಿ ಜೀವಿಸಿದರು. ಅಲ್ಲದೆ ತಮ್ಮ ಮಗ ಕೆ.ವಿ. ಅಕ್ಷರರನ್ನು ಹಾಗೆ ಬಾಳಿಸಿಕೊಂಡು ಬಂದರು. ಸುಬ್ಬಣ್ಣನವರ ಚಿಂತನೆಯ ಸ್ವರೂಪ ಮತ್ತು ಜೀವನಕ್ರಮ ಸ್ಥಳೀಯ ಪ್ರಜ್ಞೆಯನ್ನು ವಿಕಾಸಗೊಳಿಸಿದೆ. ವಿಲಾಸಿ ಜೀವನದೆಡೆಗೆ ಮುಖ ಮಾಡದೆ ಅವರು ಜೀವನ ಪರ್ಯಂತ ವಾಸ್ತವ್ಯವನ್ನು ಗ್ರಾಮದಲ್ಲೇ ಕಳೆದರು.

ನೀನಾಸಮ್ ಕೇವಲ ಹೆಗ್ಗೋಡಿಗೆ ಮಾತ್ರವಷ್ಟೇ ತನ್ನನ್ನು ಸೀಮಿತಗೊಳಿಸಿಕೊಳ್ಳಲಿಲ್ಲ. ಇಡೀ ರಾಜ್ಯಕ್ಕೆ ತನ್ನ ಕಾರ್ಯಚಟುವಟಿಕೆಗಳನ್ನು ವಿಸ್ತರಿಸಿಕೊಂಡಿತು. ಇದರ ಫಲವಾಗಿ ರೂಪುಗೊಂಡದ್ದೆ. 'ತಿರುಗಾಟ'. ರಂಗಭೂಮಿಯನ್ನು ಜನರ ಬಳಿಗೆ ಒಯ್ಯುವ ಕಾರ್ಯಕ್ರಮವಾದ 'ತಿರುಗಾಟ'ದ ಮೊದಲ ಪ್ರದರ್ಶನಗಳು ಸಾಮಾನ್ಯವಾಗಿ ಅಕ್ಟೋಬರ್ ತಿಂಗಳಲ್ಲಿ ನಡೆಯುತ್ತದೆ ಎಂದು ಹೇಳಲಾಗುತ್ತದೆ. ಅದರ ಬೆನ್ನ ಹಿಂದೆಯೇ'ಪರ್ಯಟನೆ' ಎಂಬ ವಿಶಿಷ್ಟ ಕಾರ್ಯ ಶುರುವಾಗುತ್ತದೆ. ಮೂರು ತಿಂಗಳುಗಳ ಕಾಲ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಸಂಚರಿಸಿ ಪ್ರದರ್ಶನವನ್ನು ನೀಡಲಾಗುತ್ತದೆ. 'ತಿರುಗಾಟ'ದಲ್ಲಿ ಪ್ರಾರಂಭಗೊಂಡ ಕೆಲವು ಪ್ರಮುಖ ನಾಟಕಗಳೆಂದರೆ –ಸುಬ್ಬಣ್ಣನವರು ರೂಪಾಂತರಿಸಿದ ಸಂಸ್ಕೃತ ನಾಟಕ 'ಲೋಕ ಶಾಕುಂತಲ' ಮತ್ತು ಬ್ರೆಕ್ಟ್‌ನ 'ಮೂರು ಕಾಸಿನ ಸಂಗೀತ ನಾಟಕ', ಸಂಸರ 'ಬೆಟ್ಟದರಸು', 'ವಿಗಡ ವಿಕ್ರಮರಾಯ' ಮೊದಲಾದವುಗಳ ಸಂಯೋಜಿತ ರೂಪ ಮತ್ತು ಕೆ.ವಿ. ಅಕ್ಷರರವರು ತಮ್ಮ ನಿರ್ದೇಶನದಲ್ಲಿ ಪ್ರದರ್ಶಿಸಿದ 'ಸಾಂಬ ಶಿವ ಪ್ರಹಸನ' ಮತ್ತು 'ನೀಲಿ ಕುದುರೆ: ಬನ್ನಂಜೆ ಗೋವಿಂದಚಾರ್ಯರು ಅನುವಾದಿಸಿದ 'ಮಣ್ಣಿನ ಬಂಡಿ', ಪ್ರಸನ್ನರವರು ಬರೆದು ನಿರ್ದೇಶಿಸಿದ 'ತದ್ರೂಪಿ' ಮತ್ತು ಮಕ್ಕಳಿಗಾಗಿ ಕಂಬಾರರ 'ಅಲಿಬಾಬಾ' ಅಲ್ಲದೆ ಬಿ.ವಿ. ಕಾರಂತರು ರೂಪಾಂತರಿಸಿದ 'ನೀಲಿ ಕುದುರೆ' -ಇತ್ಯಾದಿ.

ಆರಂಭದಲ್ಲಿ ಸುಬ್ಬಣ್ಣನವರ ಮೊದಲ ನಾಟಕಗಳಲ್ಲೊಂದಾದ 'ಮ್ಯಾಕ್‌ಬೆತ್' ಪಶ್ಚಿಮಬಂಗಾಳದ ಹಳ್ಳಿ ಹಳ್ಳಿಗಳಲ್ಲಿ ಪ್ರದರ್ಶನಗೊಂಡವು. ಸುಮಾರು ೪೦ ವರ್ಷಗಳ ಬಳಿಕ 'ತಿರುಗಾಟ'ವು ಇಂಥದೇ ಎರಡೂ ನಾಟಕಗಳನ್ನು ಆಯ್ಕೆ ಮಾಡಿಕೊಂಡಿತು ಎನ್ನುವುದು ಗಮನಾರ್ಹ ಸಂಗತಿಯಾಗಿದೆ. ಕನ್ನಡದ ರಂಗಭೂಮಿ ಇಡೀ ಭಾರತದ ಸಾಂಸ್ಕೃತಿಕ ಪರಂಪರೆಗಳ ಬಗೆಗೆ ಮುಕ್ತವಾದ ಧೋರಣೆಯನ್ನು ಹೊಂದಿದೆ. ಕನ್ನಡ ರಂಗಭೂಮಿ ಪರಂಪರೆಯು ಯಾವುದನ್ನಾದರಾಗಲಿ ಸಂಪೂರ್ಣವಾಗಿ ಸ್ವೀಕರಿಸದೆ ಅಥವಾ ನಿರಾಕರಿಸದೆ ಇರುವಂಥದು. ಮೂಲತಃ ಕುರಿತು ತಲೆ ಕೆಡಿಸಿಕೊಳ್ಳದೆ ಮೌಲಿಕವಾದದ್ದನ್ನು ಮಾತ್ರ ಎಲ್ಲಿಂದಲಾದರೂ ಸ್ವೀಕರಿಸುವುದೇ ನೀನಾಸಮ್‌ನ ವೈಶಿಷ್ಟ್ಯವಾಗಿದೆ' ಎಂಬುದಾಗಿ ಸುಬ್ಬಣ್ಣನವರು ಹೇಳುತ್ತಾರೆ.

'ತಿರುಗಾಟ'ದಲ್ಲಿ ಪ್ರದರ್ಶನಗೊಳ್ಳುವ ನಾಟಕಗಳನ್ನು ವೀಕ್ಷಿಸುವವರು ಬಹುಪಾಲು ಜನರು ಹಳ್ಳಿ ಮತ್ತು ಹೋಬಳಿ ಮಟ್ಟದವರೆ ಆಗಿರುತ್ತಾರೆ. ಇವರಿಗೆ ಸಾಮಾನ್ಯವಾಗಿ ರಂಗಪರಂಪರೆಯ ಅರಿವಿರುವುದಿಲ್ಲ. ಕೇವಲ ಕಂಪನಿ ನಾಟಕಗಳನ್ನೋ ಅಥವಾ ಯಕ್ಷಗಾನವನ್ನೋ ನೋಡುತ್ತಿದ್ದವರಿಗೆ ನೂತನ ಪ್ರಯೋಗಗಳನ್ನು ಆಸ್ವಾದಿಸುವಂತೆ ಮಾಡಿದ್ದು ನೀನಾಸಮ್‌ನ ಪ್ರಮುಖ ಸಾಧನೆಯೆಂದೇ ಪರಿಗಣಿಸಬೇಕಾಗುತ್ತದೆ. ಅದರಲ್ಲೂ ನೀನಾಸಮ್‌ನ ಮಹತ್ವಾಕಾಂಕ್ಷೆಯ ಪ್ರಯೋಗಗಳಲ್ಲಿ 'ತಿರುಗಾಟ ೮೫' ಪ್ರಮುಖವಾದುದ್ದಾಗಿದೆ. 'ತಿರುಗಾಟ ೮೫'ರಿಂದ ಉತ್ತೇಜಿತರಾದ ಕೆ.ವಿ. ಅಕ್ಷರದವರು "ನೀನಾಸಾಮ್‌ನ ಸಂಕಲ್ಪ ಇರುವುದೇ ಗ್ರಾಮೀಣ

ಜನತೆಯನ್ನು ತಲುಪಿ ಒಂದು ಜನಸಂಸ್ಕೃತಿಯನ್ನು ನಿರ್ಮಾಣ ಮಾಡುವ, ನಾಟಕಕಲೆ ಪ್ರತಿಯೊಬ್ಬನನ್ನು ತಟ್ಟುವ ಸಾಮುದಾಯಿಕ ಪ್ರಕ್ರಿಯೆಯ ಅನುಷ್ಠಾನದಲ್ಲಿ ಇದು ಸಾಧ್ಯ ಎಂಬುದನ್ನು 'ತಿರುಗಾಟ ೮೫' ತೋರಿಸಿಕೊಟ್ಟಿದೆ"[೨೧] ಎಂದು ಹೇಳುತ್ತಾರೆ.

ನೀನಾಸಮ್ ತನ್ನ ಪ್ರದರ್ಶನಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಹೊಸ ಹೊಸ ಪ್ರಯೋಗಗಳ ಮೂಲಕ ವಿಭಿನ್ನ ರೀತಿಯ ಅನುಭವಗಳನ್ನು ಕೊಡುವಾಗ, ನಾಟಕಭಾಷೆಯು ಪ್ರೇಕ್ಷಕರಿಗೆ ಸಂವಹನವಾಗುವ ಹೊಣೆಗಾರಿಕೆಯಿಂದ ವರ್ತಿಸಿದೆ. ಪ್ರೇಕ್ಷಕರ ರಂಜನೆ ಮತ್ತು ಚಪ್ಪಾಳೆಗಳಿಗೆ ಹಾತೊರೆಯದೆ, ವ್ಯಕ್ತಿಯ ಮನಸ್ಸಿನ ಮೇಲೆ ನಿಗಾ ಇಟ್ಟು, ಆತನ ಮೇಲೆ ಪರಿಣಾಮ ಬೀರಬಹುದಾದ ಪ್ರಭಾವದ ಕುರಿತು ಚಿಂತಿಸದೆ, ತತ್‌ಕ್ಷಣಕ್ಕೆ ಅಲ್ಲದಿದ್ದರು ದೀರ್ಘಕಾಲದಲ್ಲಿಯಾದರೂ, ವ್ಯಕ್ತಿಯ ಸುಪ್ತಾವಸ್ಥೆಯಿಂದ ಜಾಗೃತಗೊಳ್ಳುವ ಕ್ರಿಯೆಯ ಬಗ್ಗೆ ಆಲೋಚಿಸಿದೆ, 'ನೀನಾಸಮ್ ಹಿನ್ನೆಲೆಯ ಸೆಲೆ' ಎಂಬ ಲೇಖನದಲ್ಲಿ ಸುಬ್ಬಣ್ಣನವರು ಹೇಳಿರುವ ಈ ಮಾತುಗಳನ್ನು ಗಮನಿಸಿದರೆ ಸ್ಪಷ್ಟವಾಗುತ್ತದೆ.

"ರಂಗ ಕ್ರಿಯೆಂಬುದು ಪರಿಣಾಮದಲ್ಲಿ ಒಂದು ಸಮುದಾಯದ ಗುಪ್ತಪ್ರಜ್ಞೆಯೊಳಗೆ ನಡೆವ ನಿಶ್ಯಬ್ಧ ಮಾತುಕತೆಯಾಗಿ ನೀರವ ಮಂಥನವಾಗಿ ಪರಿಣಮಿಸಿಕೊಳ್ಳುತ್ತದೆ. ಈ ಕ್ರಿಯೆಗೆ ಕಾಲದ ಕಟ್ಟು ಕೂಡ ಇಲ್ಲದಿರಬಹುದು. ಒಬ್ಬ ಪ್ರೇಕ್ಷಕನಿಗೆ ಯಾವತ್ತೋ ನೋಡಿ ಅವತ್ತೆ ಮರೆತ ನಾಟಕವೊಂದರ ಅನುಭವವು ಹತ್ತು ವರ್ಷಗಳ ಮೇಲೆ ಅದಾವುದೋ ಸಂದರ್ಭದಿಂದ ನೆನಪಾಗಿ ಅದರ ಸರಿ–ಪ್ರಕ್ರಿಯೆ ಪ್ರಾರಂಭವಾಗಲೂಬಹುದು."[೨೨]

ಯಾವುದೋ ಒಂದು ಹಳ್ಳಿಯ ಮೂಲೆಯಲ್ಲಿ ಜನರನ್ನು ರಂಗಭೂಮಿಯ ರೋಮಾಂಚನ ಲೋಕಕ್ಕೆ ಆಹ್ವಾನಿಸಿಕೊಳ್ಳುತ್ತ ತನ್ನೂರಿನವರನ್ನು ಮಾತ್ರವಲ್ಲ, ಕರ್ನಾಟಕದ ಇತರ ಭಾಗಗಳ ಜನರನ್ನೂ ವಿಭಿನ್ನ ರೀತಿಯ ಪ್ರಯೋಗ ಮತ್ತು ನಾಟಕ ಶಿಬಿರ –ಇತ್ಯಾದಿಗಳಿಗೆ ಒಡ್ಡಿಕೊಂಡಿದ್ದು ನೀನಾಸಮ್‌ನ ಸಾಂಸ್ಕೃತಿಕ ವೈಶಿಷ್ಟ್ಯವೇ ಆಗಿದೆ.

ಕೆಳವರ್ಗ ಮತ್ತು ಅಸ್ಪೃಶ್ಯರಿಗಾಗಿ ೧೯೮೩–೮೪ರಲ್ಲಿ ನೀನಾಸಮ್ 'ಜನಸ್ಪಂದನ' ಕಾರ್ಯಕ್ರಮದ ಯೋಜನೆಯನ್ನು ಹಾಕಿಕೊಂಡು ರಾಜ್ಯದ ಅಲಕ್ಷಿತ ಮೂಲೆಮೂಲೆಗಳಿಗೆ ತೆರಳಿ ನಾಟಕಗಳ ಶಿಬಿರ ನಡೆಸುತ್ತಾ, ನಟ–ನಟಿಯರು ಮತ್ತು ಪ್ರೇಕ್ಷಕವರ್ಗವನ್ನು ಬೆಳೆಸಿತು. ರಂಗಚಟುವಟಿಕೆಗಳನ್ನು ಬೆಳೆಸುವಂತೆ ಜನರಲ್ಲಿ ಹುರುಪು ತುಂಬಿತು ಇದೇ ಸಂದರ್ಭದಲ್ಲಿ ಜರುಗಿದ ನೀನಾಸಮ್‌ನ ಮಹತ್ವಾಕಾಂಕ್ಷೆಯ ಮತ್ತೊಂದು ಪ್ರಯೋಗವೆಂದರೆ ಮಂಚಕೇರಿಯಲ್ಲಿನ ಕೆಳವರ್ಗದ ಸಮಾಜದವರಾದ 'ಸಿದ್ಧಿ' ಎಂಬ ಜನಾಂಗದವರಿಂದ ಚಿನುಆ ಅಚಿಬೆಯ 'Things Fall Apart' ಆಡಿಸಿದ್ದು ಈ ಪ್ರದರ್ಶನ ಅಂತಹ ಸಣ್ಣ ಕೆಲಸವೇನಾಗಿರಲಿಲ್ಲ; ಇದೊಂದು ಶ್ರಮದಾಯಕ ಕೆಲಸವಾಗಿತ್ತು.

---

೨೧ ಅದೇ, ಪು.೨೦೭.

೨೨ ಸುಬ್ಬಣ್ಣ, ಕೆ.ವಿ., ಲೇಖನ ಸಂಕಲನ ೧೯೫೩–೨೦೦೪, ಅರೆಶತಮಾನದ ಅಲೆಬರಹಗಳು, ಸಂಪಾದನೆ– ಟಿ.ಪಿ. ಅಶೋಕ, ಅಕ್ಷರ ಪ್ರಕಾಶನ, ಸಾಗರ, ೨೦೦೪, ಪು.೬೮೧.

ಮಂಚಿಕೇರಿಯ ಬಳಿ ವಾಸವಾಗಿರುವ 'ಸಿದ್ಧಿ'ಗಳ ಮೂಲ ಅವರಿಗೆ ನಿಗೂಢವಾಗಿದೆ. ಅಲ್ಲದೆ ಸರ್ಕಾರವು ಸಹ ಈ ಬುಡಕಟ್ಟಿನ ಜನಾಂಗದ ಬಗ್ಗೆ ನಿರ್ಲಕ್ಷ್ಯ ತಾಳಿತ್ತು. ಅಂತಹ ಸಂದರ್ಭದಲ್ಲಿ ಮಂಚಿಕೇರಿಯ ಹವ್ಯಾಸಿ ತಂಡಕ್ಕೆ 'ಅಂತಿಗೊನೆ' ಮತ್ತು ಒಂದು ಮಕ್ಕಳ ನಾಟಕವನ್ನು ನಿರ್ದೇಶಿಸಲು ಜಂಬೆಯವರು ಹೋದಾಗ ಅಲ್ಲಿ 'ಸಿದ್ಧಿ' ಜನಾಂಗದವರ ಪರಿಚಯವಾಯಿತು. ಅನಕ್ಷರಸ್ಥರಾಗಿದ್ದ ಈ ಜನಾಂಗದವರಿಂದ ಜಂಬೆಯವರು ನಾಟಕ ಆಡಿಸಿದರು. ಇದು ನೀನಾಸಮ್‌ನ ಹೆಗ್ಗಳಿಕೆಗಳಲ್ಲೊಂದಾಗಿದೆ.

ಅದುವರೆವಿಗೂ ಸರ್ಕಾರದ ನಿರ್ಲಕ್ಷ್ಯಕ್ಕೊಳಗಾಗಿದ್ದ ಈ 'ಸಿದ್ಧಿ' ಜನಾಂಗದವರನ್ನು ಪರಿಶಿಷ್ಟ ಜಾತಿ/ಪಂಗಡಗಳ ಗುಂಪಿಗೆ ಸೇರಿಸಲಾಯಿತು. ಮೊತ್ತ ಮೊದಲ ಬಾರಿಗೆ ಈ ಜನಾಂಗವು ನಟರಾಗಿ ರಂಗ ಪ್ರಪಂಚವೊಂದನ್ನು ನಿರ್ಮಿಸಬಲ್ಲವರಾಗಿ (ಇಂದಿಗೂ ಕೂಡ ತಮ್ಮದೇ ಆದ 'ಶೈಲಿ'ಯನ್ನು ರೂಪಿಸಿಕೊಂಡಿದ್ದಾರೆ) ದಾಖಲಾಗುತ್ತಾರೆ. ಹೀಗೆ ಅಲಕ್ಷಿತಗೊಂಡಿದ್ದ ಈ ಜನಾಂಗಕ್ಕೆ ಸಮಾಜದಲ್ಲಿ ಸ್ಥಾನ-ಮಾನ ಕಲ್ಪಿಸಿಕೊಡುವಲ್ಲಿ ನೀನಾಸಮ್‌ನ ಸಾಧನೆಯೂ ಸೇರಿದೆ.

ಒಟ್ಟಂದದಲ್ಲಿ ನೀನಾಸಮ್ ಕೇವಲ ನಾಟಕಗಳ ಪ್ರದರ್ಶನಗಳಿಗಷ್ಟೇ ಕಾರ್ಯ ಪ್ರವೃತ್ತವಾಗದೆ, ಚಲನಚಿತ್ರ ರಸಗ್ರಹಣ ಶಿಬಿರ, ವಿಚಾರ ಸಂಕಿರಣಗಳು, ಸಂಗೀತ, ಲಲಿತಕಲೆಗಳು ಮೊದಲಾದವುಗಳ ಕುರಿತು ಸಮಾಲೋಚನೆ ಮತ್ತು ದೂರದೂರಿನಿಂದ ಬರುವ ಹಿತೈಷಿಗಳು, ಅತಿಥಿಗಳು ಮತ್ತು ಆಸಕ್ತರು ಮುಂತಾದವರ ಊಟ, ವಸತಿ ವ್ಯವಸ್ಥೆಯನ್ನು ಏಕಕಾಲದಲ್ಲಿ ನಿರ್ವಹಿಸಿಕೊಂಡು ಹೋಗುತ್ತಿದೆ.

ಶಿವರಾಮಕಾರಂತರ ರಂಗಮಂದಿರವನ್ನು ಸಿನಿಮಾ ಪ್ರದರ್ಶಿಸಲು ಬಳಸಿಕೊಳ್ಳಲಾಯಿತು. ನೀನಾಸಮ್ ಚಿತ್ರಸಮಾಜ ಪುಣೆಯಿಂದ ಚಿತ್ರಗಳನ್ನು ತರಿಸಿ ಪ್ರತಿವಾರ ಚಿತ್ರಗಳನ್ನು ತೋರಿಸುತ್ತಿತ್ತು. ನಂತರ ೧೯೭೭ರಲ್ಲಿ ಸುಬ್ಬಣ್ಣನವರು ಪೂರ್ಣ ಪ್ರಮಾಣದ ಚಿತ್ರೋತ್ಸವ ನಡೆಸಲು ನಿರ್ಧರಿಸಿದರು. ಅದರಂತೆ ಪ್ರತಿರಾತ್ರಿಯು ಹತ್ತು ದಿನಗಳ ಕಾಲ ಶ್ರೇಷ್ಟ ಚಿತ್ರಗಳನ್ನು ಪ್ರದರ್ಶಿಸಲಾಯಿತು. ಇವುಗಳಲ್ಲಿ ಕುರಸೋವ, ಐನ್‌ಸ್ಟೈನ್ ಮತ್ತು ಫೆಲಿನಿ ಪ್ರಮುಖವಾದುವುಗಳಾಗಿವೆ. ಯಾವುದೇ ಪೂರ್ವಾಗ್ರಹಗಳಿಲ್ಲದೆ ಕಲಾತ್ಮಕ ಚಿತ್ರಗಳನ್ನು ಕಂಡು ಅದ್ಭುತವಾದ ಪ್ರತಿಕ್ರಿಯೆ ನೀಡುತ್ತಿದ್ದ ಗ್ರಾಮೀಣ ಜನತೆಯನ್ನು ಕಂಡು ಸುಬ್ಬಣ್ಣನವರು ಆಶ್ಚರ್ಯಚಕಿತರಾದರೆಂದು ಪಿ.ವಿ. ಸುಬ್ರಾಯರವರು ಹೇಳುತ್ತಾರೆ.

ಚಲನಚಿತ್ರ ರಸಗ್ರಹಣ ಶಿಬಿರವು ಕೂಡ ಅಷ್ಟೇ ಮಹತ್ವವಾಗಿದೆ. ದಿನ ಪೂರ್ತಿ ಅಲ್ಲಿನ ಶಿಬಿರಾರ್ಥಿಗಳು ಚಲನಚಿತ್ರದ ಬಗ್ಗೆ ಉಪನ್ಯಾಸ ಕೇಳುತ್ತಿದ್ದರು. ಇದಕ್ಕಾಗಿ ಪುಣೆಯಿಂದ ಅನುಭವವುಳ್ಳ ಉಪನ್ಯಾಸಕರನ್ನು ಆಹ್ವಾನಿಸಿಕೊಳ್ಳಲಾಗುತ್ತಿತ್ತು. ಈ ಮಧ್ಯೆ ಸುಬ್ಬಣ್ಣನವರು ಶಿಬಿರಗಳನ್ನು ನಡೆಸಲು ಕೆಲವು ಉತ್ಸಾಹಿ ಯುವಕರನ್ನು ತಯಾರು ಮಾಡುತ್ತಿದ್ದರು. ಇದರ ಜೊತೆಗೆ ಅನೇಕ ಚಿತ್ರಗಳ ಕನ್ನಡ ಅವತರಣಿಕೆಗಳನ್ನು ಶಿಬಿರದಲ್ಲಿ ಬೆಳೆಸುವಂತೆ ನೋಡಿಕೊಳ್ಳುತ್ತಿದ್ದರು. ಇದಕ್ಕಾಗಿ ಪ್ರತಿಚಿತ್ರದ ಕಥಾಹಂದರವುಳ್ಳ ಸುಮಾರು ೪೦ ಶ್ರೇಷ್ಠ ಚಿತ್ರಗಳ ಪರಿಚಯ ಪುಸ್ತಕವನ್ನು ಕನ್ನಡದಲ್ಲಿ ಪ್ರಕಟಿಸಿದರು.

ಸ್ಥಳೀಯರನ್ನು ತಯಾರು ಮಾಡುವ ಉದ್ದೇಶದಿಂದ ನೀನಾಸಮ್ ರೆಪರ್ಟರಿಯ ಮಾದರಿಯಲ್ಲೇ ಸುಬ್ಬಣ್ಣನವರು ಚಲನಚಿತ್ರವನ್ನು ಬೇರೆಡೆ ಒಯ್ಯುವ ಕಾರ್ಯಕ್ರಮ ರೂಪಿಸಿದರು. ಹದಿನಾರು ಮಿ.ಮಿ. ಪ್ರೊಜೆಕ್ಟರ್, ನಕಲುಯಂತ್ರ ಎರಡು ಬೆರಳಚ್ಚು ಯಂತ್ರಗಳು, ಒಂದು ಟೇಪ್‌ಕಾರ್ಡರ್ ಮತ್ತು ಒಂದು

ಸಂಚಾರಿವಾಹನ ಹಾಗೂ ಚಲನಚಿತ್ರ ಲೈಬ್ರರಿ ಇವೆಲ್ಲವನ್ನು ಪೋರ್ಡ್ ಪ್ರತಿಷ್ಠಾಪನದ ಹಣದಿಂದ ತೆಗೆದುಕೊಳ್ಳಲಾಯಿತು. ನಂತರ ಇವೆಲ್ಲರಿಂದ ಉತ್ತೇಜಿತರಾದ ಸುಬ್ಬಣ್ಣನವರು 'ಥಿಯೇಟರ್ ಬ್ಯಾಂಕ್' ಸ್ಥಾಪಿಸಿದರು. ಇದರ ಪ್ರಮುಖ ಉದ್ದೇಶವೆಂದರೆ ಸ್ಥಳಿಯವಾಗಿ ನಾಟಕಕ್ಕೆ ಬೇಕಾಗುವ ವಸ್ತುಗಳನ್ನೆಲ್ಲಾ ತನ್ನಲ್ಲಿಟ್ಟುಕೊಳ್ಳುವುದು ಮತ್ತು ಅದರ ಸಂಪೂರ್ಣ ಜವಾಬ್ದಾರಿಯನ್ನು ಸ್ಥಳೀಯ ರಂಗ ಸಂಸ್ಥೆಗಳಿಗೆ ವಹಿಸಿಕೊಡುವುದು.

ಹೀಗೆ ನೀನಾಸಮ್ ಎಲ್ಲರನ್ನು ಕೌಟುಂಬಿಕ ಮನೋಧರ್ಮದ ಭೂಮಿಕೆಯ ಮೇಲೆ ನಡೆಸಿಕೊಂಡಿದೆಯೆನ್ನುವುದು ಗಮನಾರ್ಹ. ನೀನಾಸಮ್‌ನ ಕ್ರಿಯಾಶೀಲ ಚಟುವಟಿಕೆಗೆ ಒಂದು ಅತ್ಯುತ್ತಮ ಮಾದರಿಯೆನ್ನಬಹುದು. ನೀನಾಸಮ್‌ನ ಯಶಸ್ಸು ಸುಬ್ಬಣ್ಣ ಎಂಬ ವೈಯಕ್ತಿಕ ಸಾಧನೆಯ ಮೇಲೆ ನಿಂತಿಲ್ಲ. 'ಹೆಗ್ಗೋಡಿನಲ್ಲಿ ನನ್ನಿಂದಾಗಿಯೇ ಎಲ್ಲವೂ ಸಂಭವಿಸುತ್ತಿರುವುದಲ್ಲ ನೀನಾಸಮ್ ಎನ್ನುವುದೇ ಒಂದು ಸಾಮಾಜಿಕ ಪ್ರಕ್ರಿಯೆಯ ಪರಿಣಾಮ, ಠಾಗೋರ್, ಗಾಂಧಿ, ಕಾರಂತರು ಎಲ್ಲರೂ ಭಾಗವಾಗಿರುವ, ಭಾಗಿಯಾಗಿರುವ ಇಂಡಿಯಾದೆಲ್ಲಡೆ ನಡೆಯುತ್ತಿರುವ ಸಾಮಾಜಿಕ ಪ್ರಕ್ರಿಯೆ ಇದು ನೀನಾಸಮ್ ಕೇವಲ ಹೆಗ್ಗೋಡಿನಿಂದಷ್ಟೇ ಅಲ್ಲ; ಇಡೀ ಗ್ರಾಮೀಣ ಸಮುದಾಯದಲ್ಲಿ ಹೊರಹೊಮ್ಮಿದ ಎಲ್ಲರ ಸಾಂಸ್ಕೃತಿಕ ಪ್ರತಿಫಲನ ಈ ನೀನಾಸಮ್ ಹೆಗ್ಗೋಡು ಕೇವಲ ಕೇಂದ್ರಬಿಂದು''[೨೩] ಎಂಬ ಸುಬ್ಬಣ್ಣನವರ ನುಡಿಗಳು ಅವರೆಂತಹ ವ್ಯಕ್ತಿತ್ವವುಳ್ಳವರೆಂಬುದನ್ನು ಮನಗಾಣಿಸುತ್ತದೆ.

ನೀನಾಸಮ್ ಒಳಗೆ ಸಮುದಾಯವಿಲ್ಲ; ಸಮುದಾಯದೊಳಗೆ ನೀನಾಸಮ್ ಇದೆ. ತಾನು ನಿಂತು ನೆಲದಲ್ಲೇ ಜಗತ್ತನ್ನು ತನ್ನೊಳಗೆ ಆವಾಹಿಸಿಕೊಳ್ಳುತ್ತಿದೆ ಎಂಬುದೇ ಇದರ ವೈಶಿಷ್ಟ್ಯವಾಗಿದೆ. ಮಾಲಿನಿನಾಯರ್‌ರವರು ಗಿರೀಶ್‌ಕಾರ್ನಾಡರು ನಡೆಸಿದ ಸಂದರ್ಶನದಲ್ಲಿ ಮಾತನಾಡುತ್ತಾ, ". . . ಹೊರಜಗತ್ತಿಗೆ ಮುಕ್ತವಾಗಿ ತೆರೆದುಕೊಂಡಂತಹ ಒಂದು ವಿಭಿನ್ನ ಬಗೆಯ ಸಾಂಸ್ಕೃತಿಕ ಪರಿಸರವನ್ನು ಹೆಗ್ಗೋಡಿನಲ್ಲಿ ಉಂಟುಮಾಡಬೇಕೆಂಬುದೇ ಅವರ ಮುಖ್ಯ ಉದ್ದೇಶ''[೨೪] ಎಂದು ಹೇಳಿಕೊಳ್ಳುತ್ತಾರೆ. ಈ ಮಾತು ಕಾರ್ಯಪ್ರವೃತ್ತವಾಗಿ ಮಾತ್ರವಲ್ಲದೆ, ಆರ್ಥಿಕವಾಗಿಯೂ ಸತ್ಯ. ಸುಬ್ಬಣ್ಣನವರ ಪಾರದರ್ಶಕ ವ್ಯಕ್ತಿತ್ವವನ್ನು ಇದು ಬಿಂಬಿಸುತ್ತದೆ. ಆದರೆ ವಿಮರ್ಶಕರಾದ ರಹಮತ್ ತರೀಕೆರೆಯವರು 'ಮನಸ್ಸನ್ನು ಬೆಳೆಸಿದ ಚಿಂತಕ' ಎಂಬ ಲೇಖನದಲ್ಲಿ ನೀನಾಸಮ್‌ನ ತಾತ್ವಿಕತೆಯ ಕುರಿತು ಕೆಲವು ಸಂದೇಹಾತ್ಮಕ ಪ್ರಶ್ನೆಗಳನ್ನು ಎತ್ತುತ್ತಾರೆ. ಶೂದ್ರರು, ದಲಿತರು ಹೆಗ್ಗೋಡಿನ ಕಡೆಗೆ ಮುಖ ಮಾಡದಿರುವುದರ ಕುರಿತು, ಲಂಕೇಶ್, ತೇಜಸ್ವಿ ಮತ್ತು ದೇವನೂರು ಮೊದಲಾದ ಲೇಖಕರು ಹೆಗ್ಗೋಡಿನ ಜೊತೆ ಗುರುತಿಸಿಕೊಳ್ಳಲು ಇಷ್ಟಪಡದಿರುವುದರ ಕುರಿತು ಪ್ರಸ್ತಾಪ ಮಾಡುತ್ತಾರೆ.

ಮೇಲಿನ ಭಿನ್ನಾಭಿಪ್ರಾಯಗಳು ಮತ್ತು ಟೀಕೆಗಳು ಏನೇ ಇದ್ದರು ಇವುಗಳ ಹೊರತಾಗಿಯೂ ನೀನಾಸಮ್ ಸಂಸ್ಕೃತಿಗೆ ಅಪಾರ ಕೊಡುಗೆಗಳನ್ನು ನೀಡಿದೆ. ತನ್ನ ಅಸ್ಥಿತ್ವದ ವೈವಿಧ್ಯತೆಯನ್ನು

---

[೨೩] ರಂಗಧಾಮ, ಶ್ರೀ. ಕೆ.ವಿ. ಸುಬ್ಬಣ್ಣ ಅಭಿನಂದನ ಗ್ರಂಥ, ಸಂಪಾದಕ– ಟಿ. ಮಹಾಬಲೇಶ್ವರ ಭಟ್ಟ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೫, ಪು.೨೧೨.

[೨೪] ಅದೇ, ಪು.೧೦೪.

ಗುರುತಿಸಿಕೊಳ್ಳುತ್ತಲೆ, ಅನ್ಯವನ್ನು ಸಹ್ಯವಾಗಿಸಿಕೊಳ್ಳುವ ಒಂದು ಸಾಂಸ್ಥಿಕ ಸಂಸ್ಥೆಯಾಗಿ ಇಂದಿಗೂ ರಚನಾತ್ಮಕವಾಗಿದೆ. ಈ ಭಾರಿಯ (೨೦೦೭) 'ತಿರುಗಾಟ'ಕ್ಕೆ ತನ್ನನ್ನು ಸಜ್ಜುಗೊಳಿಸಿಕೊಳ್ಳುತ್ತಿದೆ. ಚೆನ್ನಕೇಶವ ಮತ್ತು ರಘುನಂದನರವರು ಎರಡು ನಾಟಕಗಳನ್ನು ನಿರ್ದೇಶಿಸುತ್ತಿದ್ದಾರೆ. ನೀನಾಸಮ್ ಜೊತೆಗೆ ಬೇರೆ ರೆಪರ್ಟರಿಗಳಾದ –'ಶಿವಸಂಚಾರ', 'ಚಿನ್ನರಮೇಳ', 'ರಂಗಾಯಣ', 'ರಂಗಭಾರತಿ' ಹಾಗೂ 'ಜನಮನ' ಮೊದಲಾದ ತಂಡಗಳು ಪ್ರಸ್ತುತದಲ್ಲಿ ಕ್ರಿಯಾಶೀಲವಾಗಿವೆ.

ಒಟ್ಟಾರೆ ನೀನಾಸಮ್ ಕನ್ನಡ ಸಂಸ್ಕೃತಿಯನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ. ಒಂದು ಸಮುದಾಯದ ಪ್ರಜ್ಞಾವಂತಿಕೆಯನ್ನು ರೂಪಿಸುವಲ್ಲಿ ಇಂದಿಗೂ ಶ್ರಮಿಸುತ್ತಿದೆ. ಮೊದಲೆ ಹೇಳಿದಂತೆ ವಿಕೇಂದ್ರೀಕರಣ ತತ್ತ್ವಗಳ ಬುನಾದಿಯ ಮೇಲೆ ರೂಪುಗೊಂಡು ಗಾಂಧೀಜಿಯವರ ಕನಸನ್ನು ಸಾಕಾರಗೊಳಿಸುವಲ್ಲಿ ಕಾರ್ಯಪ್ರವೃತ್ತವಾಯಿತು. ಒಂದು ಹಳ್ಳಿಯ ಜನರನ್ನು ಜಡರನ್ನಾಗಿಸದೆ, ಅವರಲ್ಲಿ ಸದಾ ಅರಿವು–ಎಚ್ಚರಗಳನ್ನು ತುಂಬುವಲ್ಲಿ ಶ್ರಮಿಸಿತು.

ಸುಬ್ಬಣ್ಣನವರು 'ನೀನಾಸಮ್ ಹಿನ್ನೆಲೆಯ ಸೆಲೆ'ಯಲ್ಲಿ ಗಾಂಧೀಜಿಯವರು ಹೇಳಿದ್ದ ಕೆಲವು ಮಾತುಗಳನ್ನು ಉಲ್ಲೇಖಿಸುತ್ತಾರೆ. ಆ ಮಾತುಗಳು ಸ್ವತಃ ಸುಬ್ಬಣ್ಣನವರಿಗೆ ಅನ್ವಯಿಸುವುದರಿಂದ ಅದನ್ನು ಇಲ್ಲಿ ಉಲ್ಲೇಖಿಸುತ್ತಿದ್ದೇನೆ: 'ದೀಪಸ್ತುತಿ ಭ್ರಮಿಸುತ್ತಾ ಬಲಿಯಾಗುವ ಪತಂಗದ ಪಾಡು ಇಂಡಿಯಾಕ್ಕೂ ಬಂದಿತೋ, ಯಾರಿಗೆ ಗೊತ್ತು? ಆದರೆ, ಇಂಡಿಯಾವನ್ನು ಮತ್ತು ಆ ಮೂಲಕ ಜಗತ್ತನ್ನು ಅದರಿಂದ ಪಾರುಮಾಡಲು ನನ್ನ ಕಡೆಯ ಉಸಿರಿನ ತನಕ ಪ್ರಯತ್ನಿಸಬೇಕಾಗಿದ್ದು ನಮ್ಮ ಕರ್ತವ್ಯ' ಎಂಬ ಗಾಂಧೀಜಿಯವರ ಮಾತುಗಳು, ನೀನಾಸಮ್‌ನ ಸಾಂಸ್ಕೃತಿಕ ಮಹತ್ವದ ಸಂದರ್ಭದಲ್ಲಿ ಸುಬ್ಬಣ್ಣನವರಿಗೆ ಪೂರಕವಾಗುತ್ತವೆ.

ಒಟ್ಟಂದದಲ್ಲಿ ನೀನಾಸಮ್ ರಂಗಭೂಮಿಯ ಮೂಲಕ ಸಮಗ್ರ ಕರ್ನಾಟಕದ ಗ್ರಾಮೀಣ ಜನತೆಯನ್ನು ಸಮಾನವಾಗಿ ತಲುಪಿ ಜನಪದದ ಅನುಭವಮಂಟಪವಾಗಬೇಕು ಎಂಬ ಅದರ ನಂಬಿಕೆಯೆ, ನಮ್ಮೆಲ್ಲರನ್ನು ಎಚ್ಚರಗೊಳಿಸುತ್ತದೆ.

**ಸ್ಥಳೀಯತೆ ಅಥವಾ ದೇಶೀಯತೆ :**

"ನನಗೆ ನೀನಾಸಮ್ ಒಂದೇ ನನ್ನ ಶಾಲೆ, ಗೋರ್ಕಿಗೆ ಜಗತ್ತೇ ಒಂದು ವಿಶ್ವವಿದ್ಯಾಲಯ ಆದ ಹಾಗೆ ನನಗೆ ನನ್ನ ಹಳ್ಳಿ"[೨೫] ಎಂಬ ಮಾತನ್ನು ಸುಬ್ಬಣ್ಣನವರು ಜಿ. ರಾಜಶೇಖರರೊಂದಿಗೆ ಮಾತುಕತೆಯ ಸಂದರ್ಭದಲ್ಲಿ ಹೇಳಿಕೊಳ್ಳುತ್ತಾರೆ. ಸುಬ್ಬಣ್ಣನವರು ತಮ್ಮ ಬರಹಗಳು ಮತ್ತು ಭಾಷಣಗಳಲ್ಲಿ ಪ್ರತಿಪಾದಿಸುವುದು ಸ್ಥಳೀಯತೆ ಬಗೆಗಿನ ಕಾಳಜಿಯ ಕುರಿತೆ. ತಮ್ಮ ಜೀವನದುದ್ದಕ್ಕೂ ದೇಶೀಯತೆ (ಸಮುದಾಯ)ಯ ನಾಶದ ವಿರುದ್ಧ ನಡೆಯುವ ಒಳಸಂಚು, ಕೃತಿಮತೆ ಮತ್ತು ವ್ಯಾಪಾರದ ಹೆಸರಿನಲ್ಲಿ ನಡೆಯುವ ಸಾಂಸ್ಕೃತಿಕ ದಂಧೆ–ಮೊದಲಾದವುಗಳನ್ನು ವಿರೋಧಿಸುತ್ತ ಬಂದರು.

ಪ್ರಜಾಪ್ರಭುತ್ವದಲ್ಲಿ ಅಪಾರ ನಂಬಿಕೆಯುಳ್ಳ ಸುಬ್ಬಣ್ಣನವರು ಅದನ್ನು ಕೇವಲ ಒಂದು ರಾಜಕೀಯ ವ್ಯವಸ್ಥೆಯನ್ನಾಗಿ ಮಾತ್ರ ನೋಡದೆ ಜೀವನಕ್ರಮವನ್ನಾಗಿ (ಸಹ್ಯ) ರೂಪಿಸಿಕೊಂಡರು. ಸ್ವಾತಂತ್ರ್ಯ, ಸಮಾನತೆ,

---

[೨೫] ಅದೇ, ಪು.೨೩೨.

ಸಹಕಾರ ಮತ್ತು ಹೆಚ್ಚಾಗಿ ವಿಕೇಂದ್ರೀಕರಣಗಳ ಭದ್ರ ಅಡಿಪಾಯದಿಂದ ಮಾತ್ರ ಪ್ರಜಾಪ್ರಭುತ್ವದ ಯಶಸ್ಸು, ಅರ್ಥಪೂರ್ಣತೆ ಸಾಧ್ಯ ಎಂದು ನಂಬಿಕೊಂಡು ಬಂದವರು. ಗಾಂಧೀಜಿಯವರ 'ಸರ್ವೋದಯ' ಪರಿಕಲ್ಪನೆಯನ್ನು ತಮ್ಮ ಜೀವವದ ತಾತ್ವಿಕ ತಳಹದಿಯನ್ನಾಗಿ ರೂಪಿಸಿಕೊಂಡು ದೇಶೀಯತೆಯ ವಕ್ತಾರದಂತೆ ಮಾತನಾಡತೊಡಗಿದರು.

'ಬಸವಲಿಂಗಪ್ಪನವರಿಗೆ ಬಹಿರಂಗ ಪತ್ರ', 'ಅಣುಸ್ಫೋಟ ಕುರಿತು', 'ಸೌಂದರ್ಯಸ್ಪರ್ಧೆಯನ್ನು ಪ್ರತಿಭಟಿಸುವುದೇತಕ್ಕೆ?' ಮತ್ತು ಬ್ರೂಕ್ ಮಹಾಶಯನ ಆಧುನಿಕ ಅಶ್ವಮೇಧ' ಮೊದಲಾದ ಲೇಖನಗಳು ದೇಶಿಯತೆಯನ್ನು ಕಾಪಾಡಿಕೊಳ್ಳುವ ಹಂಬಲದಲ್ಲಿ 'ರಾಷ್ಟ್ರಪ್ರಭುತ್ವ' ಮತ್ತು 'ಜಾಗತಿಕ ಪ್ರಭುತ್ವ'ಗಳ ವಿರುದ್ಧದ ಸೆಣಸಾಟಗಳಾಗಿ ಕಾಣುತ್ತವೆ ಬ್ರೂಕ್ ಪಶ್ಚಿಮದವನು ಎಂಬ ಕಾರಣದಿಂದ ಆತನನ್ನು ವಿರೋಧಿಸುವುದಿಲ್ಲ; ಆತ 'ಕಬಳಿಸುವವ', 'ನುಂಗುವವ', 'ನವವಸಾಹತು ಶಾಹಿ'ಯ ವಕ್ತಾರ ಎಂಬ ಕಾರಣಕ್ಕಾಗಿ ಆತನನ್ನು ವಿರೋಧಿಸುತ್ತಾರೆಯಲ್ಲದೆ, ಆತನನ್ನು ಹೊಗಳಿದ ಸಮೂಹಮಾಧ್ಯಮಗಳು ಮತ್ತು ಆಪ್ತರಾದ ಬಿ.ವಿ. ಕಾರಂತರು, ಪ್ರಫುಲ್ ಜಯಕರ್‌ರವರು ಆತನ ಹಿಂದೆ ತಿರುಗಿದ್ದನ್ನು ಕಂಡು ಖೇದಗೊಳ್ಳುತ್ತಾರೆ,

ಸಹಕಾರ, ಮುಕ್ತವಾಣಿಜ್ಯ, ಉದಾರನೀತಿ ಮತ್ತು ಧನಸಹಾಯ ಮುಂತಾದವುಗಳ ನೆಪದಲ್ಲಿ ಕೊಳ್ಳುಬಾಕ ಸಂಸ್ಕೃತಿಯೊಂದು ವಸಾಹತುಶಾಹಿ ಅಥವಾ ನವವಸಾಹತು ಶಾಹಿಯನ್ನು ತೃತೀಯ ಜಗತ್ತಿನ ಮೇಲೆ ಹೇರುವ ನೀತಿಯನ್ನು ಖಂಡಿಸುತ್ತಾರೆ, ಅಭಿವೃದ್ಧಿಯ ನೆಪದಲ್ಲಿ ಇಂತಹ ಸೂಕ್ಷ್ಮ ತಂತ್ರಗಳನ್ನು ರೂಢಿಸಿಕೊಳ್ಳುವುದರ ಬಗೆಗೆ ಎಚ್ಚರಿಕೆ ಕಾಯ್ದುಕೊಳ್ಳುವಂತೆ ಜನರನ್ನು ಒತ್ತಾಯಿಸುತ್ತಾರೆ. ಹೀಗೆಂದ ಮಾತ್ರಕ್ಕೆ ಸುಬ್ಬಣ್ಣನವರು ವಿದೇಶಿ ವ್ಯಕ್ತಿಗಳನ್ನೆಲ್ಲ ಖಂಡಿಸುತ್ತಾರೆ ಎಂದರ್ಥವಲ್ಲ, ಅವರು ಮೆಚ್ಚುವ ಮೇರಿ ಸೇಟನ್ ಮತ್ತು ಫ್ರಿಟ್ಸ್ ಬೆನೆವಿಟ್ಸ್ ಇದ್ದಾರೆ. 'ಮಾನವೀಯತೆಯನ್ನೇ ಮುಟ್ಟಿ ಮಾತಾಡಿಸುವವ' ಎಂದೆ ಫ್ರಿಟ್ಸ್ ಬೆನೆವಿಟ್ಸ್‌ರನ್ನು ಶ್ಲಾಘಿಸುತ್ತಾರೆ. ಬ್ರೂಕ್‌ನ ವೈಭವ ಜೀವನ, ಧಿಮಾಕು, ಪ್ರತಿಷ್ಠೆಯನ್ನು ಖಂಡಿಸುತ್ತಲೆ ಬೆನೆವಿಟ್ಸ್‌ರವರ ಸರಳತೆ, ಮುಗ್ಧತೆ, ಸೌಜನ್ಯ ಮತ್ತು ಗರ್ವವಿಲ್ಲದ ಅವರ ನಡೆ-ನುಡಿಯನ್ನು ಅಪಾರವಾಗಿ ಮೆಚ್ಚಿಕೊಳ್ಳುತ್ತಾರೆ. ಬ್ರೂಕ್ ನವವಸಾಹತುಶಾಹಿಯನ್ನು ಸೃಷ್ಟಿಸುವ ಗೋಮುಖ ವ್ಯಾಘ್ರನಾದರೆ, ಬೆನೆವಿಟ್ಸ್ 'ಜನಪದ'ರೊಂದಿಗೆ ಬೆರೆತು ಜೀವಿಸುವ ಸುಸಂಸ್ಕೃತ ವ್ಯಕ್ತಿ.

ಲಂಕೇಶರೊಳಗೊಂಡಂತೆ ಎಲ್ಲರು (ಸಮೂಹ ಮಾಧ್ಯಮಗಳನ್ನೊಳಗೊಂಡು) ಬ್ರೂಕ್‌ನನ್ನು ಪ್ರಶಂಸಿಸುತ್ತಿದ್ದ ಕಾಲದಲ್ಲಿ ಸುಬ್ಬಣ್ಣನವರು ಆತನನ್ನು ಟೀಕಿಸುವ ರೀತಿಯೇ ಅವರನ್ನು ಇತರೆಲ್ಲರಿಗಿಂತಲೂ ಭಿನ್ನವಾಗಿ ನಿಲ್ಲಿಸಿದೆ. ಇದು ಸುಬ್ಬಣ್ಣನವರು ಚಿಂತಿಸುತ್ತಿದ್ದ ವಿಭಿನ್ನತೆಯನ್ನು ತಿಳಿಸುತ್ತದೆ.

'ಅಣುಸ್ಫೋಟ ಕುರಿತು' ಎಂಬ ಲೇಖನದಲ್ಲಿ ಸುಬ್ಬಣ್ಣನವರು ವ್ಯಕ್ತಪಡಿಸುವ ಎಚ್ಚರ ಮತ್ತು ಆತಂಕ ಇದು:

"ಈಗ ಪಾಕಿಸ್ತಾನ ಚೀನಾಗಳು ನಮ್ಮ ಮೇಲೆ ದಾಳಿ ಮಾಡಲು ಸಜ್ಜಾಗಿವೆ. ಅದನ್ನು ಸೋಲಿಸಲು ಈ ತಯ್ಯಾರಿ ಎನ್ನುವುದಾದರೆ ಕೊಂಚ ಯೋಚಿಸಿ, ಯುದ್ಧ ಶುರುವಾಯ್ತು ಎನ್ನೋಣ. ಇವತ್ತಿನ ಜಾಗತಿಕ ಸಂದರ್ಭದಲ್ಲಿ ಅದು ಮುಕ್ತಾಯದ ತನಕ, ಈ ಎರಡೇ ದೇಶಗಳ ನಡುವೆ ನಡೆಯುವುದಿಲ್ಲ. ಆಚೆಗಿಷ್ಟು

ಈಚೆಗಿಷ್ಟು ರಾಷ್ಟ್ರಗಳು ಸೇರಿಕೊಳ್ಳುತ್ತವೆ ಬಹುಮಟ್ಟಿಗೆ ಅದು ಜಾಗತಿಕ ಯುದ್ಧವಾಗಿ ಪರಿಣಮಿಸುವುದು ಅನಿವಾರ್ಯ. ಹೀಗಾಗುವಾಗ ನಮಗಿರುವ ಬೆಂಬಲ ಮುಖ್ಯವಾದೀತಲ್ಲದೆ ನಮ್ಮ ತಯ್ಯಾರಿ ನಗಣ್ಯವಾಗುತ್ತದೆ."[೨೬]

ಸುಬ್ಬಣ್ಣನವರು ಪ್ರತಿಪಾದಿಸುವ 'ಸಹ' ಅಥವಾ 'ಸಹ್ಯತೆ'ಯ ಮತ್ತೊಂದು ನೆಲೆಯೇ ಇದಾಗಿದೆ. ಬಲಿಷ್ಟ ರಾಷ್ಟ್ರವೊಂದು ಆಕ್ರಮಣ ನಡೆಸಿ ಇಡೀ ವ್ಯವಸ್ಥೆಯನ್ನು ತನ್ನ ಕಪಿಮುಷ್ಠಿಯಲ್ಲಿ ಬಂಧಿಸಿರುವುದರ ಬಗೆಗೆ ಎಚ್ಚರಿಸುತ್ತಾರೆ. ಹಿಂಸೆಗೆ ಪ್ರತಿಹಿಂಸೆ ಎಂಬುದರ ಬದಲಾಗಿ ಸಮಾನ ಮಾನವೀಯ ನೆಲೆಯನ್ನು ಪ್ರತಿಪಾದಿಸುತ್ತಾರೆ.'

ಸ್ಥಳೀಯ ಚಿಂತನೆಯಿಂದ ಹೊರಡುವ ಅವರ ಕಾಳಜಿಗಳು, ಗ್ರಾಮಮಟ್ಟದ ಸಂಪನ್ಮೂಲಗಳ ಒಡೆತನ ಜನರ ಕೈಗೆ ಸಿಗಬೇಕು ಮತ್ತು ಅವರ ಬದುಕನ್ನು ರೂಪಿಸಿಕೊಳ್ಳುವ ಆಯ್ಕೆಯ ಸ್ವಾತಂತ್ರ್ಯ ಅವರಿಗೆ ದಕ್ಕಬೇಕು ಎಂದು ಪ್ರತಿಪಾದಿಸುತ್ತಾರೆ. ಪಂಚಾಯತ್ ರಾಜ್ ಬಗ್ಗೆ ಬರೆಯುತ್ತಲೇ ಭೂಮಿಯ ಒಡೆತನದ ಕುರಿತ ಪ್ರಶ್ನೆಗಳನ್ನು ಎತ್ತಿಕೊಳ್ಳುತ್ತಾರೆ. ಬೇರೆ ಬೇರೆ ಜಾತಿ ವರ್ಗಗಳಿರುವ ಬಹುಮುಖೀ ಸಮಾಜದಲ್ಲಿ ರಾಜಕಾರಣ ನಡೆಸುವ ಹುನ್ನಾರಗಳು, ಕುಟಿಲತೆಗಳ ಬಗೆಗೆ ಎಚ್ಚರ-ಅರಿವು ಮೂಡಿಸಲು ಪ್ರಯತ್ನಿಸುತ್ತಾರೆ. ರಾಮಕೃಷ್ಣ ಹೆಗಡೆಯವರ ಕಾಲದಲ್ಲಿ ಸರಕಾರ ಪಂಚಾಯತ್ ರಾಜ್ ವಿಕೇಂದ್ರೀಕೃತ ವ್ಯವಸ್ಥೆಯನ್ನು ಜಾರಿಗೊಳಿಸಿದಾಗ ಸಂತೋಷಗೊಂಡ ಸುಬ್ಬಣ್ಣನವರು ಮುಂದೆ (೧೯೯೧ ರಲ್ಲಿ) ಪಂಚಾಯತ್ ರಾಜ್ ವ್ಯವಸ್ಥೆಯನ್ನು ತಿದ್ದುಪಡಿ ಮಾಡಲು ಹೊರಟ ಸರ್ಕಾರದ ವಿರುದ್ಧ ಕೆಂಡಾಮಂಡಲವಾಗುತ್ತಾರೆ. ಇದನ್ನು 'ಪಂಚಾಯತ್ ರಾಜ್ಯದ ಎಳೆಕುಡಿಗೆ ಕೊಡಲಿಯೇಟು' ಎಂಬ ಲೇಖನದಲ್ಲಿ ಕಾಣಬಹುದು. ಇಲ್ಲಿ ಸರ್ಕಾರದ ನಡವಳಿಕೆಯನ್ನು ವಿರೋಧಿಸುತ್ತಲೆ, ಬಹುರಾಷ್ಟ್ರೀಯ ವಾಣಿಜ್ಯಕೂಟವು ಮುಕ್ತತೆಯ ಹೆಸರಿನಲ್ಲಿ ಬಂದು ನುಸುಳಿಕೊಳ್ಳುವುದನ್ನು ವಿವರಿಸುತ್ತಾರೆ. ಅಧಿಕಾರವೆಲ್ಲ ಏಕೀಕೃತವಾದಾಗ ಸರ್ವಾಧಿಕಾರ, ಪಾಳೇಗಾರತನ ಸೃಷ್ಟಿಯಾಗುತ್ತದೆ ಮತ್ತು ಸ್ಥಳೀಯತೆಗೆ ಕೊಡಲಿಯೇಟು ಬೀಳುವುದು ಖರೆ ಎಂಬ ಆತಂಕ ವ್ಯಕ್ತಪಡಿಸುತ್ತಾರೆ. ಅದಕ್ಕಾಗಿ ನಮ್ಮ ಸ್ವಾತಂತ್ರ್ಯವನ್ನು ಹೋರಾಟಗಳ ಮೂಲಕ ನಾವೇ ರಕ್ಷಿಸಿಕೊಳ್ಳಬೇಕೆಂದು ಹೇಳುತ್ತಾರೆ.

ಮೇಲಿನದು ರಾಜ್ಯಕ್ಕೆ ಸಂಬಂಧಿಸಿದಂತೆ ಕುರಿತ ವಿಮರ್ಶೆಯಾದರೆ, ಕೇಂದ್ರಕ್ಕೆ ಸಂಬಂಧಿಸಿದಂತೆ, 'ಜಪಾನಿ ವಸಾಹತು: ಒಂದು ಪತ್ರ'ದಲ್ಲಿ ಭಾರತ ಸರ್ಕಾರವು 'ಆಧುನಿಕ ಸುಧಾರಣೆಗೆಂದು ಇಡೀ ಪ್ರಪಂಚವನ್ನೇ ಹಲ್ಲುಗಿಂಜಿ ಆಹ್ವಾನಿಸುತ್ತಿರುವ ನಡಾವಳಿಯನ್ನು ಮತ್ತು ಜಪಾನಿಗೆ ಕೇಂದ್ರ ಸರ್ಕಾರವು ಖುದ್ದಾಗಿ ಹೋಗಿ ವೀಳ್ಯೆದೆಲೆ ನೀಡಿ ಬಂದಿರುವುದನ್ನು ಕಂಡು ಹೇಸುತ್ತಾರೆ. ಜಪಾನಿ ಉದ್ಯಮಗಳು ಅಭಿವೃದ್ಧಿಯ ನೆಪದಲ್ಲಿ ಇಲ್ಲಿ ಬಂದು. ಕೊನೆಗೆ ತಮ್ಮ ಅಸ್ತಿತ್ವವನ್ನು ಶಾಶ್ವತವಾಗಿ ಸರ್ಕಾರದ ಅಧಿಕೃತತೆಯ ಮೂಲಕ ಸ್ಥಾಪಿಸಿಕೊಳ್ಳುವುದನ್ನು ವಿವರಿಸುತ್ತಾರೆ. ಅಂದರೆ ಸುಬ್ಬಣ್ಣನವರು ಇಡೀ ಭಾರತವನ್ನು ಕಿರು-ಕಿರು ಸಮುದಾಯಗಳನ್ನಾಗಿ ಗ್ರಹಿಸಿಕೊಂಡಿರುವುದರಿಂದ ಅವರ ಚಿಂತನೆ 'ರಾಷ್ಟ್ರ'ವನ್ನು ಒಳಗೊಂಡಿದ್ದಾಗಿದೆ.

---

[೨೬] ಸುಬ್ಬಣ್ಣ, ಕೆ.ವಿ., ಲೇಖನ ಸಂಕಲನ ೧೯೫೪-೨೦೦೪, ಅರೆಶತಮಾನದ ಅಲೆಬರಹಗಳು, ಸಂಪಾದನೆ- ಟಿ.ಪಿ. ಅಶೋಕ, ಅಕ್ಷರ ಪ್ರಕಾಶನ, ಸಾಗರ, ೨೦೦೪, ಪು.೧೧೯.

ಸುಬ್ಬಣ್ಣನವರ ಬದ್ಧತೆಗಳಲ್ಲೊಂದಾದ ಸಾಂಸ್ಕೃತಿಕ ವಿಕೇಂದ್ರೀಕರಣವೇ ಸ್ಥಳೀಯತೆಯ ಬಗೆಗಿರುವ ಅವರ ಕಾಳಜಿಯನ್ನು ವ್ಯಕ್ತಪಡಿಸುತ್ತದೆ. ನೀನಾಸಂ ಪ್ರತಿಷ್ಠಾನದ ಮೂಲಕ ಅದನ್ನು ಮತ್ತೊಂದು ರೀತಿಯಲ್ಲಿ ಸಾಧಿಸಲು ಅವರು ಪ್ರಯತ್ನಿಸಿದರು. ಸಮುದಾಯ ಅಥವಾ ಸ್ಥಳೀಯತೆಯನ್ನು ಅಭಿವೃದ್ಧಿಪಡಿಸಲು ಯುವಕರನ್ನು ತಯಾರುಮಾಡುವುದೆ 'ರಂಗಶಿಕ್ಷಣ ಕೇಂದ್ರ'ದ ಪ್ರಮುಖ ಉದ್ದೇಶಲ್ಲೊಂದಾಗಿಯೆಂಬುದೆ ಮಹತ್ವದ ವಿಷಯವಾಗಿದೆ.

'ಗ್ರಾಹಕ ಚಳುವಳಿಗೆ ಎಚ್ಚರ ಬೇಕು' ಎಂಬ ಲೇಖನದಲ್ಲಿ ಸುಬ್ಬಣ್ಣನವರು ಅಂತಿಮವಾಗಿ ಪ್ರತಿಪಾದಿಸುವುದು ಸರ್ವೋದಯದ ವಿವೇಕವನ್ನೇ. ಪಾಶ್ಚಾತ್ಯರಿಂದ ಆಮದು ಮಾಡಿಕೊಂಡ 'ಗ್ರಾಹಕ ಚಳುವಳಿ' ಅಲ್ಲಿನ ಮಾದರಿಯಲ್ಲೇ ರೂಪಿತಗೊಂಡು ಹೃದಯಹೀನವಾದುದರ ಬಗ್ಗೆ ಆತಂಕಗೊಳ್ಳುತ್ತಾರೆ. ಇಂಗ್ಲಿಷಿನ 'Consumer' ಎಂಬ ಪದವೆ ಅವರಿಗೆ 'ಕಬಳಿಸುವವ', 'ನುಂಗುವವ' ಎಂಬುದಾಗಿ ಕಾಣಿಸುತ್ತದೆ. ಹಣ ಬಿಟ್ಟು ಬೇರೇನೂ ಯೋಚಿಸಿದಂತೆ ಮಾಡುವ ವಾಣಿಜ್ಯ ಸಂಸ್ಕೃತಿಯ ಮಾದರಿಯು ಭಾರತದಲ್ಲಿ ಸೃಷ್ಟಿಗೊಳ್ಳುತ್ತಿದೆಯೇನೋ ಎಂದು ಸಂದೇಹ ವ್ಯಕ್ತಪಡಿಸುತ್ತಾ, "ಗ್ರಾಹಕ ಚಳುವಳಿಯೆಂಬುದು ನಮ್ಮಲ್ಲಿ ಸಹಜೀವನದ ಚಳುವಳಿಯಾಗಬೇಕು, ಸಹಕಾರದ ಚಳುವಳಿಯಾಗಬೇಕು. ಅದು ಸರ್ವೋದ ವಿವೇಕವಾಗಿ ರೂಪುಗೊಳ್ಳಬೇಕು ಹಾಗಾಗಲಿಕ್ಕೆ ಇಡೀ ಚಳುವಳಿಯನ್ನು ಸದ್ಯದ ತತ್ಕಾಲೀನ ಭ್ರಮೆಗಳ ನೆಲದಿಂದ ಹೊರಗೆ, ಬೇರೆಯೇ ನೆಲದಲ್ಲಿ ನೆಟ್ಟು ಸಾಕಬೇಕು."[೨೭]

ಇಲ್ಲಿ ಬೇರೆಯೆ ನೆಲ ಎಂಬುದು ಅಂತಿಮವಾಗಿ ಸ್ಥಳೀಯತೆಯನ್ನು ಕುರಿತ ಕಾಳಜಿಯೆ ಆಗಿದೆ. ತಮ್ಮ ಬದುಕು ಉತ್ತಮವಾಗಬೇಕು ಎಂದು ಯೋಚಿಸುವುದರ ಬದಲಾಗಿ, ಎಲ್ಲರ ಬದುಕು ಉತ್ತಮವಾಗಬೇಕು ಎಂದು ಚಿಂತಿಸಬೇಕಾಗುತ್ತದೆ. ಗಾಂಧೀಜಿಯು ಜನರಿಗೆ ತಲುಪದ, ಜನ ಭಾಗವಹಿಸದ ಯಾವ ಅಭಿವೃದ್ಧಿಯನ್ನು ಹೇಗೆ ಒಪ್ಪಿಕೊಳ್ಳುತ್ತಿರಲಿಲ್ಲವೊ, ಹಾಗೆಯೇ ಸುಬ್ಬಣ್ಣನವರು ಕೂಡ ಪ್ರಜಾಪ್ರಭುತ್ವ ಅವರಿಗೆ ದೊಡ್ಡ ಆದರ್ಶ, ಮೌಲ್ಯ ಹಾಗೆಂದು ಆ ವ್ಯವಸ್ಥೆಯಲ್ಲಿ ದೋಷವೇ ಇಲ್ಲ ಎಂದು ಅವರು ಹೇಳಲಿಲ್ಲ. ಬೇರೊಂದು ವ್ಯವಸ್ಥೆಗಿಂತ ಪ್ರಜಾಪ್ರಭುತ್ವವನ್ನು ನಂಬಿದರು. ಅವರೇ ಹೇಳಿಕೊಳ್ಳುವಂತೆ, 'ನಾನು ಕಲಿತಿರುವುದೆಲ್ಲ ಈ ಸಮುದಾಯದಿಂದ ಮತ್ತು ನೀನಾಸಮ್‌ನಿಂದ' ಎಂಬ ಮಾತು ಸ್ಥಳೀಯ ನೆಲೆಗಳಿಂದ ಸುಬ್ಬಣ್ಣನವರು ಗ್ರಹಿಸಿಕೊಂಡ ಚಿಂತನೆಯ ಸ್ವರೂಪದ ಬಗೆಗೆ ಬೆಳಕು ಚೆಲ್ಲುತ್ತದೆ.

ಸಾಂಸ್ಕೃತಿಕ ಯಜಮಾನಿಕೆಯು ರಾಜಕೀಯ ಮತ್ತು ಆರ್ಥಿಕ ಯಜಮಾನಿಕೆಗಳಿಗಿಂತ ಅಪಾಯಕಾರಿಯಾಗಿರುವುದನ್ನು ಅರಿತಿದ್ದ ಸುಬ್ಬಣ್ಣನವರು 'ಜಾತಿಪದ್ಧತಿಯ ಕುರಿತು' ಲೇಖನದಲ್ಲಿ ಪಟ್ಟಭದ್ರ ಹಿತಾಸಕ್ತಿಗಳು ಹಾಗೂ ರಾಜಕಾರಣಿಗಳು ಇಬ್ಬರನ್ನು ವಿಮರ್ಶಿಸುತ್ತಾ, ಅಂತಿಮವಾಗಿ ಸಮುದಾಯಗಳ ವಿಸ್ತರಣೆಯ ಕುರಿತು ಮಾತನಾಡುತ್ತಾರೆ ಸ್ಥಳೀಯ ನೆಲೆಗಳ ಬೇರುಗಳು ದೃಢಗೊಳ್ಳಬೇಕಾದರೆ, 'ವಿಕೇಂದ್ರೀಕರಣ ಮತ್ತು ಆ ಮೂಲಕ ಹೊಸ ಕಿರು ಗ್ರಾಮಸಮುದಾಯಗಳ ಪುನರ್ನಿರ್ಮಾಣ' ಅತ್ಯಗತ್ಯ ಎಂದು ಒತ್ತಿ ಹೇಳುತ್ತಾರೆ. ಇದು ಜಾತಿಪದ್ಧತಿಯನ್ನು ನಿರ್ಮೂಲನಗೊಳಿಸಲಿಕ್ಕೆ ಇರುವ ಮತ್ತೊಂದು ಸಾಧನವೂ ಹೌದು.

---

[೨೭] ಅದೇ, ಪು.೧೧೬.

ಸ್ವಾತಂತ್ರ್ಯದ ನಂತರ ಎಲ್ಲರು ಅಂದುಕೊಂಡ ಹಾಗೆ ಅಧಿಕಾರವು ಎಲ್ಲ ದಿಕ್ಕುಗಳಲ್ಲಿ ವಿಕೇಂದ್ರೀಕೃತವಾಗಲಿಲ್ಲ. ಈ ವಿಕೇಂದ್ರೀಕೃತ ಸಾಧ್ಯವಾಗಬೇಕಾದರೆ, 'ರಾಷ್ಟ್ರವು ಅಂತಿಮವಾಗಿ ಲಕ್ಷಾಂತರ ಸ್ವತಂತ್ರ ಕಿರುಗ್ರಾಮ ಸಮುದಾಯಗಳ ಮಹಾ ಒಕ್ಕೂಟವೆಂಬಂತೆ, ಮಾಡಲು ಶ್ರಮಿಸಬೇಕು' ಎಂಬ ಮಾರ್ಗವನ್ನು ಸುಬ್ಬಣ್ಣನವರು ಸೂಚಿಸುತ್ತಾರೆ. ಹೀಗೆ ವಿಕೇಂದ್ರೀಕರಣದ ಸಾಧ್ಯತೆಯಿಂದ ಸ್ವಾತಂತ್ರ್ಯವು ಜನರ ಕೈಗೆ ದಕ್ಕುತ್ತದೆ ಮತ್ತು 'ಜಾತಿ'ಯು ಕ್ರಮೇಣ ಕಣ್ಮರೆಯಾಗುತ್ತ 'ಪ್ರದೇಶ ಸಮುದಾಯ' ಅಥವಾ 'ಗ್ರಾಮ ಸಮುದಾಯ'ಗಳಾಗಿ ತಮ್ಮನ್ನು ಗುರುತಿಸಿಕೊಳ್ಳುತ್ತಾರೆ ಎಂಬ ನಿಲುವು ಸುಬ್ಬಣ್ಣನವರದು,

ಫ್ರಿಟ್ಸ್ ಬೆನೆವಿಟ್ಸ್‌ರವರ ಜೊತೆ (ಸಂದರ್ಶನದಲ್ಲಿ) ಮಾತನಾಡುತ್ತಾ, ". . .ಗ್ರಾಮ ಸಂಸ್ಕೃತಿಯಿಂದ ನಗರ ಸಂಸ್ಕೃತಿಗೆ ಪರಿವರ್ತನೆಯಾಗುತ್ತಿರುವ ಸಂಕ್ರಮಣ ಇದು. ಈ ಹಂತ ದಾಟಿದ ಮೇಲೆ ಇಲ್ಲಿನ ಜನ, ಪಶ್ಚಿಮದವರ ಹಾಗೆ 'ಮಾನವೀಯತೆ' ಕಳೆದುಕೊಳ್ಳಬಹುದಲ್ಲ"[೨೮] ಎಂಬ ಪ್ರಶ್ನೆಯನ್ನು ಬೆನೆವಿಟ್ಸ್‌ಗೆ ಕೇಳುತ್ತಾರೆ. ಈ ಪ್ರಶ್ನೆ ಸುಬ್ಬಣ್ಣನವರ ಕಳವಳವನ್ನು ಮತ್ತು ಸ್ಥಳೀಯತೆಯ ಬಗ್ಗೆ ಅವರಿಗಿದ್ದ ಆಸಕ್ತಿ, ಕಾಳಜಿಯನ್ನು ವ್ಯಕ್ತಪಡಿಸುತ್ತದೆ.

ಸುಬ್ಬಣ್ಣನವರು ಪ್ರತಿಪಾದಿಸುವ 'ಗ್ರಾಮಸಮುದಾಯ'ವು ಅತಿಯಾದ ವ್ಯಾಮೋಹ ಅಥವಾ ವೈಭವೀಕರಣ ಎಂದು ತಿಳಿಯಬೇಕಿಲ್ಲ. ಸಮುದಾಯದ ಲೋಪಗಳನ್ನು ಮತ್ತು ಅಲ್ಲಿನ ವಾಸ್ತವ ಸತ್ಯಗಳನ್ನು ಅವರು ಬಲ್ಲರು. ಅವರ ಅಪೇಕ್ಷೆ ಅಂತಿಮವಾಗಿ ಇದು ಸ್ಥಳೀಯತೆಯಲ್ಲಿ ಬೇರು ಬಿಟ್ಟ ಮನುಷ್ಯನ ವಿವೇಕ ಮಹತ್ವವಾದುದು. ಅದು 'ಜಾನಪದ ವಿವೇಕ'. ಸ್ಥಳೀಯ ಬದುಕು ಈ ನೆಲದ ಸಂಸ್ಕೃತಿಯನ್ನು ರೂಪಿಸುತ್ತದೆ. ಸ್ಥಳಿಯ ನೆಲೆ ಕಳಕೊಂಡ ಮನುಷ್ಯ ಎಲ್ಲವನ್ನೂ 'ವ್ಯಸನ'ವನ್ನಾಗಿ ಗ್ರಹಿಸಿಕೊಳ್ಳುವ ಅಪಾಯವಿದೆ ಮತ್ತು ಆತನ ಚಿಂತನೆ ಸೀಮಿತಕ್ಕಷ್ಟೆ ವ್ಯಾಪಿಸುವ ಮನೋಧರ್ಮವುಳ್ಳದ್ದಾಗಿರುತ್ತದೆ. ಒಟ್ಟಾರೆ ತಾನು ನಿಂತ ಮಣ್ಣಿನ ವ್ಯಕ್ತಿತ್ವವೇ ಆತನನ್ನು ವಿಶ್ವವ್ಯಕ್ತಿಯನ್ನಾಗಿ ರೂಪಿಸಲು ಸಾಧ್ಯ ಎಂಬುದಾಗಿದೆ.

**ಅಕ್ಷರ ಪ್ರಕಾಶನ :**

'ನೀನಾಸಮ್' ಮತ್ತು 'ಅಕ್ಷರ ಪ್ರಕಾಶನ' ಸುಬ್ಬಣ್ಣನವರ ಸೃಜನಶೀಲ ಚಟುವಟಿಕೆಗಳ ಎರಡು ಪ್ರಮುಖ ಅಂಗಗಳು. ಕರ್ನಾಟಕದಲ್ಲಿ ಜಿ.ಬಿ. ಜೋಷಿಯವರ 'ಮನೋಹರ ಗ್ರಂಥಮಾಲಾ' ಮತ್ತು ಕೆ.ವಿ. ಸುಬ್ಬಣ್ಣನವರ 'ಅಕ್ಷರ ಪ್ರಕಾಶನ' ಎರಡೂ ಸಂಸ್ಕೃತಿಗೆ ಸಂಬಂಧಿಸಿದಂತೆ ಮತ್ತು ಪುಸ್ತಕ ಸಂಸ್ಕೃತಿಯನ್ನು ವೃದ್ಧಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿವೆ ಎಂಬುದನ್ನು ಸಾಮಾನ್ಯವಾಗಿ ಎಲ್ಲರೂ ಒಪ್ಪಿಕೊಳ್ಳುತ್ತಾರೆ. 'ಅಕ್ಷರ ಪ್ರಕಾಶನ'ವು, 'ಮನೋಹರ ಗ್ರಂಥಮಾಲಾ'ಕ್ಕಿಂತ ಹೆಚ್ಚಿನ ಮಹತ್ವವುಳ್ಳದ್ದಾಗಿದೆ. 'ನವ್ಯ ಸಾಹಿತ್ಯ ಚಳುವಳಿ'ಯು ಭದ್ರವಾಗಿ ನೆಲೆಯೂರುವಂತೆ 'ಅಕ್ಷರ ಪ್ರಕಾಶನ'ವು ವಹಿಸಿದ ಪಾತ್ರ ಎಂದೆಂದಿಗೂ ಚಿರಸ್ಥಾಯಿಯಾಗಿರುವಂಥದ್ದು.

"ನಮ್ಮ ಸಮುದಾಯಗಳನ್ನು ಕುರಿತು ನನ್ನ ಕುತೂಹಲವು ಉಕ್ಕೇರಿದ ಆ ೭೦ರ ದಶಕದಲ್ಲಿ ಕೂಡಾ ನಾನು ಕನ್ನಡದ ನಮ್ಮ ನವ್ಯ ಸಾಹಿತ್ಯ ಚಳುವಳಿಯಲ್ಲಿ ತುಂಬ ಆಸಕ್ತಿವಹಿಸಿಕೊಂಡವನಾಗಿದ್ದೆ' ನವ್ಯ ಸಾಹಿತ್ಯದ

---

[೨೮] ಅದೇ, ಪು.೭೩೧.

ಕೃತಿಗಳನ್ನೆಲ್ಲ ಪ್ರಕಟಿಸಿದ್ದೆ. 'ಆಧ್ಯಾತ್ಮಿಕತೆಯೆಂಬ ನಮ್ಮ ಭೋಳೆತನಕ್ಕೆ ಬಲಿಯಾಗಿ ರಚಿತವಾದ ನಮ್ಮ ಹಳೆಯ ಸಾಹಿತ್ಯರಾಶಿಗಳನ್ನು ಪ್ರಶ್ನಿಸುತ್ತ ಅವುಗಳ ಟೊಳ್ಳನ್ನು ಅರಿತುಕೊಳ್ಳಬೇಕು; ಆ ಪ್ರಭಾವದಿಂದ ಹೊರಗೆ ಬಂದು ಬದಲಾದ ಆಧುನಿಕ ಯುಗಕ್ಕೆ ತಕ್ಕಂತೆ ಬದಲಾದ ಹೊಸ ವೈಚಾರಿಕ ಅಭಿವ್ಯಕ್ತಿ ಮಾರ್ಗವನ್ನು ಕಂಡುಕೊಳ್ಳಬೇಕು' ಅಂತ ನಮ್ಮ ಹಿರಿಯ ಕವಿ ಅಡಿಗರು ಘೋಷಿಸಿದ್ದರು''[೨೯] ಎಂಬುದಾಗಿ ಸುಬ್ಬಣ್ಣನವರು ಹೇಳುತ್ತಾರೆ.

ಸುಬ್ಬಣ್ಣನವರು 'ಅಕ್ಷರ ಪ್ರಕಾಶನ'ದ ಮೂಲಕ ನವ್ಯ ಸಾಹಿತ್ಯವು ಗಟ್ಟಿಯಾಗಿ ನೆಲೆಯೂರುವಂತೆ ಮಾಡಲು ಶ್ರಮಿಸಿದರು. ಆದರೆ ವಿಮರ್ಶಕ ಟಿ.ಪಿ. ಅಶೋಕರು ಹೇಳುವ, ''ಆಶ್ಚರ್ಯದ ಸಂಗತಿ ಎಂದರೆ ತನ್ನೆಲ್ಲ ಸಮಕಾಲೀನ ಪ್ರತಿಭಾವಂತರು ನವ್ಯ ಚಳುವಳಿಯಲ್ಲಿ ಸಕ್ರಿಯರಾಗಿದ್ದರೂ ನವ್ಯ ಸಾಹಿತ್ಯದ ಪ್ರಭಾವಕ್ಕೆ ಸುಬ್ಬಣ್ಣ ಸಿಕ್ಕದೇ ಉಳಿದಿದ್ದು. ತಮ್ಮ ಅಕ್ಷರ ಪ್ರಕಾಶನದ ಮೂಲಕ ಅವರು ನವ್ಯ ಸಾಹಿತ್ಯ ಕೃತಿಗಳನ್ನು ವಿಪುಲ ಸಂಖ್ಯೆಯಲ್ಲಿ ಪ್ರಕಟಿಸಿದರು. 'ಸಾಕ್ಷಿ' ಪತ್ರಿಕೆಯನ್ನು ನಡೆಸಿದರು. ಆದರೆ ನವ್ಯ ವಿಮರ್ಶೆಯ ಪ್ರಯೊಗಕ್ಕೆ ಕೈ ಹಾಕಲಿಲ್ಲ''[೩೦] ಈ ಮಾತುಗಳನ್ನು ಕೇಳಿದರೆ, ಸುಬ್ಬಣ್ಣನವರ ನಿರ್ಲಿಪ್ತತೆ ವಿಸ್ಮಯ ತರಿಸುತ್ತದೆ.

ನವ್ಯ ಸಾಹಿತ್ಯ ಚಳುವಳಿಯ ಸಂದರ್ಭದಲ್ಲಿ 'ಅಕ್ಷರ ಪ್ರಕಾಶನ'ದ ಮೂಲಕ ಹೊರ ಬಂದ 'ಅಕ್ಷರ ಹೊಸ ಕಾವ್ಯ' ಪುಸ್ತಕವು ಅತ್ಯಂತ ಮಹತ್ವವುಳ್ಳದ್ದಾಗಿದೆ. ಈ ಪುಸ್ತಕವು ಕಾವ್ಯದ ಬಗ್ಗೆ ಹೊಸ ಸಂವೇದನೆ ಮತ್ತು ಹೊಸ ಹೊಸ ಆಲೋಚನಾ ಕ್ರಮಗಳನ್ನು ಬೆಳೆಸಲು ಸಾಧ್ಯವಾದ ಒಂದು ಪ್ರಮುಖ ಆ್ಯಂಥಾಲಜಿಯಾಗಿದೆ. ಪಿ. ಲಂಕೇಶರ ಸಂಪಾದಕತ್ವದಲ್ಲಿ ಹೊರಬಂದ 'ಅಕ್ಷರ ಹೊಸ ಕಾವ್ಯ'ವು ನವ್ಯ ಸಾಹಿತ್ಯ ಸ್ವರೂಪವನ್ನು ಸ್ಪಷ್ಟವಾಗಿ ತಿಳಿಸಿಕೊಡಲು ಪ್ರಯತ್ನಿಸುತ್ತದೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಒಂದು ತಲೆಮಾರಿನ ಅನೇಕ ಹೊಸ ಕವಿಗಳು 'ಅಕ್ಷರ ಪ್ರಕಾಶನ'ದ ಮೂಲಕ ಸಾಹಿತ್ಯಲೋಕಕ್ಕೆ ಪ್ರವೇಶಿಸಿದರು ಎನ್ನಬಹುದು.

ಹೊಸ ಕವಿ, ಹೊಸ ಕಾವ್ಯ ಎಂಬುದಾಗಿ 'ಅಕ್ಷರ ಹೊಸ ಕಾವ್ಯ'ದ ಪುಸ್ತಕದ ಮುನ್ನುಡಿಯಲ್ಲಿಯೇ ಹೇಳಲಾಗಿದೆ. ಹೊಸ ಬಗೆಯ ವಸ್ತುಗಳ ಆಯ್ಕೆ, ಹೊಸ ಬಗೆಯ ಮಂಡನೆಯ ಆಯ್ಕೆ, ಹೊಸ ಬಗೆಯ ಅನುಭವಗಳ ಆಗಮನ ಮತ್ತು ಹೊಸ ಬಗೆಯ ಅನುಭವಗಳ ಸಾಮರಸ್ಯ ಹಾಗೂ ಭಾಷೆಯ ಆಟ– ಇವುಗಳನ್ನೆಲ್ಲಾ ಗಮನದಲ್ಲಿರಿಸಿಕೊಂಡು ಸಂಪಾದಕರು ಈ ಆ್ಯಂಥಾಲಜಿಯನ್ನು ಆಯ್ಕೆ ಮಾಡಿದ್ದಾರೆ.

ರೋಮ್ಯಾಂಟಿಕ್ ಅಥವಾ ನವೋದಯ ಸಾಹಿತ್ಯದಲ್ಲಿ ಪ್ರಧಾನ ವಸ್ತುಗಳಾಗಿದ್ದ ರಾಷ್ಟ್ರೀಯತೆ, ನೈಸರ್ಗಿಕತೆಗಳು ಮತ್ತು ಬಡತನದ ಸಮಸ್ಯೆಗಳು ಮುಂತಾದವುಗಳನ್ನು ಬಿಟ್ಟು ಅಥವಾ ಅವುಗಳಿಂದ ದೂರಸರಿದು, ಹೊಸ ಹುಡುಕಾಟ ಶುರುವಾದದ್ದು ನವ್ಯಸಾಹಿತ್ಯ ಚಳುವಳಿಯಲ್ಲೇ ಎಂಬುದು ಐತಿಹಾಸಿಕವಾಗಿ ಮಹತ್ವವಾದುದಾಗಿದೆ.

---

[೨೯] ಅದೇ, ಪು.೭೦೩.

[೩೦] ಅದೇ, ಪು.೩೬.

ನವ್ಯಕಾವ್ಯದ ವಿನ್ಯಾಸಗಳನ್ನು ತಿಳಿಸಿಕೊಡಲೆತ್ನಿಸುವ ಸಂಪಾದಕರ ಈ ಕೆಳಗಿನ ಮಾತುಗಳನ್ನು ಎಚ್ಚರಿಕೆಯಿಂದ ಗಮನಿಸಬೇಕು:

". . .ಈ ಸಂಗ್ರಹ ಕೆಲವು ಉತ್ತಮ ಕವನಗಳ ಗುಂಪು ಮಾತ್ರ ಅಲ್ಲದೆ ತನ್ನ ತಲೆಮಾರಿನ ಕನ್ನಡ ಭಾಷೆಯ ಸೂಕ್ಷ್ಮತೆ, ಸೊಗಸನ್ನೂ ನನ್ನ ಜನಾಂಗದ ಜನರ ಜಾಣತನ, ಕಿಡಿಗೇಡಿತನ, ಪ್ರತಿಭಟನೆ, ಸೃಷ್ಟ್ಯಾತ್ಮಕ ಪ್ರತಿಭೆಯನ್ನೂ ತೋರಬೇಕು; ಹೊಸ ಕಾವ್ಯ ಕೇವಲ ದುರಂತಮಯವಾದದ್ದು, ಕ್ಲಿಷ್ಟವಾದದ್ದು, ಲೈಂಗಿಕವಾದದ್ದು, ಸಿನಿಕತದ್ದು ಎಂಬಂಥ ತಪ್ಪು ತಿಳುವಳಿಕೆಯನ್ನು ಕೊಂಚವಾದರೂ ನಿವಾರಿಸಬೇಕು ಇವು ನನ್ನ ಆಶೆಗಳಲ್ಲಿ ಕೆಲವು."[೨೧]

ನವ್ಯಕವಿ ಮತ್ತು ವಿಮರ್ಶಕ ಆಯ್ಕೆ ಮಾಡಿದ ಹಲವಾರು ನವ್ಯ ಕವಿತೆಗಳು 'ಅಕ್ಷರ ಹೊಸ ಕಾವ್ಯ'ದಲ್ಲಿ ಸೇರಿಕೊಂಡಿವೆ. ಅಡಿಗರ ಮಾದರಿ, ಶರ್ಮರ ಮಾದರಿ ಮತ್ತು ವಿ.ಜಿ.ಭಟ್ಟರ ಮಾದರಿ ಹೀಗೆ ವಿವಿಧ ಬಗೆಯ ನವ್ಯಮಾದರಿಗಳನ್ನು ಈ ಪುಸ್ತಕದಲ್ಲಿ ಗುರುತಿಸಬಹುದು. ಇದರ ಜತೆಗೆ ನವೋದಯ ಕಾವ್ಯದ ವಿಮರ್ಶೆಯನ್ನು ಸಹ ಮಾಡಲಾಯಿತು. ಪ್ರತಿಯೊಂದು ಹೊಸಕಾವ್ಯ ಮಾರ್ಗವೂ ತನ್ನ ಹಿಂದಿನ ಕಾವ್ಯಮಾರ್ಗದ ವಿಮರ್ಶೆಯೆ ಆಗಿರುತ್ತದೆ; ಅದೇ ರೀತಿ 'ನವ್ಯ ಸಾಹಿತ್ಯ'ವೂ ಆಗಿದೆ ಎಂದು ಹೇಳಬಹುದು.

ನವ್ಯಸಾಹಿತ್ಯ ಚಳುವಳಿಯ ಘಟ್ಟದಲ್ಲಿ ಗೋಪಾಲಕೃಷ್ಣ ಅಡಿಗರು ಕನ್ನಡ ಸಾಹಿತ್ಯದ ಹೊಸ ಬೆಳವಣಿಗೆಯ ಕೇಂದ್ರಬಿಂದುವಾಗಿದ್ದರು. ಆ ಕಾಲ ಘಟ್ಟದಲ್ಲೇ ಹೊಸ ಪೀಳಿಗೆಯ ತರುಣ ಬರಹಗಾರರೆಲ್ಲ ನವ್ಯಚಳುವಳಿಯಲ್ಲಿ ಅತ್ಯುತ್ಸಾಹದಿಂದ ಪಾಲ್ಗೊಂಡರು. ಈ ಉತ್ಸಾಹಿ ಬರಹಗಾರರನ್ನು ಸಾಹಿತ್ಯದ ಮುಖ್ಯವಾಹಿನಿಗೆ ತಂದದ್ದೇ 'ಸಾಕ್ಷಿ' ಪತ್ರಿಕೆಯಾಗಿದೆ. ಸಾಕ್ಷಿ ಪತ್ರಿಕೆಯ ಸಂಚಾಲಕರು ಕೆ.ವಿ. ಸುಬ್ಬಣ್ಣ ಮತ್ತು ಇದರ ಸಂಪಾದಕರು ಗೋಪಾಲಕೃಷ್ಣ ಅಡಿಗರು. ತ್ರೈಮಾಸಿಕ ಪತ್ರಿಕೆಯಾದ 'ಸಾಕ್ಷಿ'ಯು ಅಕ್ಷರ ಪ್ರಕಾಶನದಿಂದ ಪ್ರಕಟಗೊಳ್ಳುತ್ತಿತ್ತು. 'ವಿಚಾರದ ಎಲ್ಲ ಉತ್ತರಗಳಿಗೆ /ಅನುಭವದ ಎಲ್ಲ ಸ್ತರಗಳಿಗೆ' ಎಂಬ ಮುಖ್ಯವಾದ ಧ್ಯೇಯ ವಾಕ್ಯವನ್ನಿಟ್ಟುಕೊಂಡು ಹೊರಟ ಈ ಪತ್ರಿಕೆಯು ನವ್ಯಕಾವ್ಯದ ಅಥವಾ ನವ್ಯಸಾಹಿತ್ಯದ ಸ್ವರೂಪವನ್ನು ಸ್ಪಷ್ಟಗೊಳಿಸಲು ಪ್ರಯತ್ನಿಸಿತು.

ನವ್ಯಕಾವ್ಯದ ತಾತ್ತ್ವಿಕ ನಿಲುವುಗಳನ್ನು ಗ್ರಹಿಸಿಕೊಳ್ಳಬೇಕಾದರೆ 'ಸಾಕ್ಷಿ' ಪತ್ರಿಕೆಯನ್ನು ಅವಶ್ಯಕವಾಗಿ ಗಮನಿಸಲೇಬೇಕಾಗುತ್ತದೆ. ಏಕೆಂದರೆ ನವ್ಯ ಸಾಹಿತ್ಯದ ಕವಿಗಳು, ವಿಮರ್ಶಕರೆಲ್ಲ 'ಸಾಕ್ಷಿ' ಪತ್ರಿಕೆಗಾಗಿ ಬರೆಯುತ್ತಿದ್ದರು. ನವ್ಯಕಾವ್ಯಕ್ಕೆ ಸಂಬಂಧಿಸಿದಂತೆ ನಡೆಯುತ್ತಿದ್ದ ಪ್ರಮುಖ ವಾದ –ವಾಗ್ವಾದಗಳನ್ನು (ಉದಾಹರಣೆಗೆ : ಸುಬ್ರಾಯ ಚೊಕ್ಕಾಡಿಯವರು, ಎ.ಕೆ. ರಾಮಾನುಜನ್ ಕಾವ್ಯದ ಕುರಿತು ಬರೆದ – 'ಹೊಸಹಾದಿಯ ಆವಿಷ್ಕಾರ: ಹೊಕ್ಕುಳಲ್ಲಿ ಹೂವಿಲ್ಲ' ಇತ್ಯಾದಿ) ಈ ಪತ್ರಿಕೆಯಲ್ಲಿ ಗಮನಿಸಬಹುದು. ಒಟ್ಟು, ಸಂಪಾದಕರು (ಅಡಿಗರು) ಸೇರಿದಂತೆ, ಅನಂತಮೂರ್ತಿ, ಲಂಕೇಶ್, ತೇಜಸ್ವಿ, ಕೀರ್ತಿನಾಥ ಕುರ್ತಕೋಟಿ, ಸುಬ್ರಾಯ ಚೊಕ್ಕಾಡಿ, ಕೆ.ವಿ. ತಿರುಮಲೇಶ್, ನಿಸರ್ಗಪ್ರಿಯ, ಜಯಸುದರ್ಶನ್, ಮಾಧವ ಕುಲಕರ್ಣಿ, ಎಚ್.ಎಸ್. ಬಿಳಿಗಿರಿ ಮತ್ತು ಶಾಂತಿನಾಥ ದೇಸಾಯಿ ಮೊದಲಾದ ಬರಹಗಾರರು ಸಾಹಿತ್ಯಕ್ಕೆ ಸಂಬಂಧಿಸಿದಂತೆ

---

[೨೧] ಅಕ್ಷರ ಹೊಸ ಕಾವ್ಯ, ಸಂಪಾದಕ – ಪಿ. ಲಂಕೇಶ್, ಅಕ್ಷರ ಪ್ರಕಾಶನ, ಸಾಗರ, ಪು.*xiv* .

ಮಾತ್ರವೆ ಅಲ್ಲದೆ, ಭಾಷೆ, ಕಲೆ ಮತ್ತು ಸಂಸ್ಕೃತಿ ಗ್ರಹಿಕೆಗಳ ಕುರಿತಂತೆ 'ಸಾಕ್ಷಿ' ಪತ್ರಿಕೆಯಲ್ಲಿ ಬರೆಯುತ್ತಿದ್ದುದು ಬಹಳ ಮಹತ್ವದ ಸಂಗತಿಯಾಗಿದೆ.

ನವ್ಯ ಕ್ಲಿಷ್ಟವಾದುದು ಎಂಬುದರ ಜೊತೆಗೆ ಅದು ಕಾಮವನ್ನು ವೈಭವೀಕರಿಸುತ್ತದೆ ಎಂಬ ಲೋಪವು ನವ್ಯದ ವಿರುದ್ಧ ವ್ಯಕ್ತವಾಯಿತು. ಇಂತಹ ವಿರೋಧಗಳ ವಿರುದ್ಧ ತನ್ನ ನಿಲುವನ್ನು ಸ್ಪಷ್ಟಪಡಿಸಲು 'ಸಾಕ್ಷಿ'ಯು ಯತ್ನಿಸಿತು. ಉದಾಹರಣೆಗೆ : ಕೆ.ವಿ. ತಿರುಮಲೇಶರು, ಸುಬ್ರಾಯ ಚೊಕ್ಕಾಡಿಯವರ 'ತೆರೆ' ಕವನ ಸಂಕಲನದ ಕುರಿತು ಬರೆಯುತ್ತಾರೆ. ಚೆನ್ನಯ್ಯ, ಶ್ರೀಕೃಷ್ಣ ಆಲನಹಳ್ಳಿ ಮತ್ತು ಸುಬ್ರಾಯಚೊಕ್ಕಾಡಿ ಈ ಮೂರು ಜನರು, 'ಕಾಮ'ವನ್ನೇ ಹೆಚ್ಚು ಕೇಂದ್ರ ನೆಲೆಯನ್ನಾಗಿ ಮಾಡಿಕೊಂಡು ಬರೆಯುವ ನವ್ಯದ ಅಗ್ರಗಣ್ಯ ಕವಿಗಳು ಎಂದು ತಿರುಮಲೇಶರು ಅಭಿಪ್ರಾಯ ಪಡುತ್ತಾರೆ.

"ಆ ಒಂದು ನೆನಪಲ್ಲೆ ಏನು ಸುಖ ಇದೆ ಗೊತ್ತ?

ಮೊದಲ ದಿನ ಹುಡುಗಿ ತೊಡೆ ತೆರೆದ ಹಾಗೆ"

– ಎಂಬ ಚೊಕ್ಕಾಡಿಯವರ ಸಾಲುಗಳನ್ನು ಉದ್ಧರಿಸಿ, ಮುಂದುವರಿದು ಹೇಳುತ್ತಾರೆ: "ಈ ಮೂರು ಜನರಿಗೆ ಕಾಮ ಒಂದು 'ಕಾವ್ಯವಸ್ತು'ವಾಗಿರದೆ ಕಾವ್ಯಶೈಲಿ ಧೋರಣೆ, ಪ್ರಜ್ಞೆ ಆಗಿದೆ. ಕಾಮ ಕಾಮುಕತೆ ಇಲ್ಲಿ ಒಂದರೊಳಗೊಂದು ಆಕ್ರಮಿಸಿಕೊಂಡಿದೆ. ಆದರೆ ಈ ಕಾಮುಕ ಕವಿಗಳ ಕಾವ್ಯವಸ್ತು ಕಾಮವಾಗಿರದೆ, ಕಾಮದಲ್ಲಿನ ಇವರ 'Involvement' ಎಂಬುದನ್ನು ಗಮನಿಸಬೇಕು."[೨೨]

ನವ್ಯಕಾವ್ಯವು, ಮನುಷ್ಯ ಸೇಡಿನಷ್ಟೇ ತೀವ್ರವಾಗಿ, ದುಃಖದಷ್ಟೇ ತೀವ್ರವಾಗಿ, ಕಾಮದಲ್ಲೂ ತನ್ನನ್ನೂ ತೊಡಗಿಸಿಕೊಂಡಿರುತ್ತಾನೆ ಎಂಬುದನ್ನು ತಿಳಿಸಿಕೊಟ್ಟಿತ್ತು.

ನವ್ಯಸಾಹಿತ್ಯಕ್ಕೆ ಸಂಬಂಧಿಸಿದಂತೆ, ಅನುಭವವನ್ನು ಗ್ರಹಿಸುವ ಕ್ರಮ, ಭಾಷೆಯ ಬಳಕೆಯಲ್ಲಿನ ಅಭಿವ್ಯಕ್ತಿ, ಪ್ರಸ್ತುತದಲ್ಲಿ (ವರ್ತಮಾನ)ನ ಗಾಢವಾದ ಸಂಬಂಧ ಮುಂತಾದವುಗಳ ಕುರಿತು ಪತ್ರಿಕೆ ಶೋಧಿಸಲು ಯತ್ನಿಸಿತು. ಇವುಗಳ ಜೊತೆಗೆ ಪತ್ರಿಕೆಯ ನಿಲುವುಗಳನ್ನು ಕುರಿತಂತೆ ಅಡಿಗರು ಹೇಳುವ ಕೆಲವು ವಿಚಾರಗಳನ್ನು ಇಲ್ಲಿ ಹೇಳಬೇಕು. ಅವುಗಳೇನೆಂದರೆ, ಕನ್ನಡದ ಕುರಿತು ಹೆಚ್ಚು ಮಾತು ವ್ಯಕ್ತವಾಗುತ್ತಿರುವ ಈ ಸಂದರ್ಭದಲ್ಲಿ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳ ಬಗ್ಗೆ ಗಂಭೀರವಾದ, ಆಳವಾದ ವಿಮರ್ಶೆ ನಡೆಯದಿರುವುದರ ಬಗೆಗೆ ಅಡಿಗರು ಕನಲುತ್ತಾರೆ. ಹಾಗಾಗಿಯೇ 'ಸಾಕ್ಷಿ' ಪತ್ರಿಕೆಯು ಹಿಂದಿನ ಕಾವ್ಯಗಳನ್ನು ಪ್ರಸ್ತುತ ಕಾಲದಲ್ಲಿ ವಿಮರ್ಶೆಗೊಡ್ಡುವ ಕೆಲಸದಲ್ಲಿ ತೊಡಗಿಕೊಂಡಿತು. ಆಯಾಯಾ ಕಾಲಘಟ್ಟಗಳ ಕಾವ್ಯದ ಯೋಗ್ಯತೆಗಳನ್ನು ಅರಿತುಕೊಳ್ಳಲು, ಹಿಂದಿನ ಸಾಹಿತ್ಯ ಕೃಷಿಯನ್ನು, ವರ್ತಮಾನ ಸಾಹಿತ್ಯ ಜೊತೆ ಇಟ್ಟು ತೌಲನಿಕವಾಗಿ ಅಭ್ಯಸಿಸುವುದು ಅಗತ್ಯವಾಯಿತು. ಅಂದರೆ ಅಡಿಗರು ಹೇಳುವಂತೆ, 'ನಮ್ಮ ಪರಂಪರೆಯ ನಿರಂತರತೆಯನ್ನು ಸ್ಥಾಪಿಸಲು, ಹಿಂದಿನ ನೆಲೆಯಿಂದ ಇಂದನ್ನು, ಇಂದಿನ ನೆಲೆಯಿಂದ ಹಿಂದನ್ನು, ಭಾವಿಸುವುದು, ಅಭ್ಯಸಿಸುವುದು, ವಿಮರ್ಶಿಸುವುದು ಬೌದ್ಧಿಕವಾಗಿ ನಡೆಯಬೇಕಾಗಿರುವ ಕೆಲಸ' ಎಂಬುದೇ ಆಗಿದೆ.

---

[೨೨] ಗೋಪಾಲಕೃಷ್ಣ ಅಡಿಗ (ಸಂ.), ಸಾಕ್ಷಿ, ೧೧ನೇ ಸಂಚಿಕೆ, ಅಕ್ಷರ ಪ್ರಕಾಶನ, ಸಾಗರ ಹೇಮಂತ ಸಂಚಿಕೆ, ೧೯೭೧, ಪು.೧೧೩.

ಅಂದರೆ, ಕೃತಿಗಳನ್ನು ಸಂಯಮದಿಂದ ಕೂಲಂಕಷವಾಗಿ, ಪೂರ್ವಗ್ರಹವಿಲ್ಲದೆ ಅಭ್ಯಾಸ ಮಾಡಿ ಕೃತಿಗಳಿಗೆ ಬೆಲೆಕಟ್ಟುವುದು. 'ಸಾಕ್ಷಿ'ಯ ಮುಖ್ಯ ಧೋರಣೆಗಳಲ್ಲೊಂದಾಗಿತ್ತು. ಏಕೆಂದರೆ ಯಾವುದೇ ಸಾಹಿತ್ಯವು ಹೊಸದಾಗಿ ಹುಟ್ಟುವಾಗ, ಹೊಸ ಪ್ರಯೋಗಗಳನ್ನು ಕೈಗೊಳ್ಳುವಾಗ, ಅದನ್ನು ಹಿಂದಿನ ಸಾಹಿತ್ಯದೊಂದಿಗೆ ತೌಲನಿಕವಾಗಿ ಅಭ್ಯಸಿಸುವುದು ವಿಮರ್ಶೆಯ ಕ್ರಮವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಕೃತಿಪರಿಶೀಲನೆಯು ಮುಖ್ಯವಾಗುತ್ತದೆಯೆನ್ನಬಹುದು.

'ಸಾಕ್ಷಿ' ಪತ್ರಿಕೆಯ ೯ನೇ ಸಂಚಿಕೆಯಲ್ಲಿ (ಮೂರನೆಯ ವರ್ಷದ ಪ್ರಕಟಣೆ) ಅಡಿಗರು ತಮ್ಮ ಸಂಪಾದಕೀಯ ಬರಹದಲ್ಲಿ ಹೀಗೆ ಹೇಳುತ್ತಾರೆ :

"...ನಿಜವಾದ ಕೆಲಸ ಎಂದರೆ ಫಲವನ್ನು ಮರೆತ ಕೆಲಸ, ಆ ಕೆಲಸಕ್ಕೆ ತಕ್ಕ ವಾತಾವರಣವನ್ನು ಸೃಷ್ಟಿಸುವುದಕ್ಕಿಂತ ದೊಡ್ಡ ದೇಶ ಸೇವೆ ಬೇರೆ ಇಲ್ಲ. ಆ ದಿಕ್ಕಿನಲ್ಲಿ ಯತ್ಕಿಂಚಿತ್ ನಡೆಸುವುದೇ 'ಸಾಕ್ಷಿ'ಯ ಉದ್ದೇಶ."[೩೩]

ಪ್ರತಿಫಲಾಪೇಕ್ಷೆಯಗೋಸ್ಕರವೆ ಜರುಗುತ್ತಿದ್ದ ಸಂಸ್ಕೃತಿಯ ಪ್ರಕ್ರಿಯೆಯನ್ನು ಕುರಿತು ಮೇಲಿನ ಮಾತನಾಡುತ್ತಾರೆ ಮತ್ತು ರಾಜಕೀಯ ಪೊಳ್ಳು ಆದರ್ಶಗಳನ್ನು, ಕನ್ನಡದ ಮೇಲಿನ ಮುಗ್ಧ ಭಜನೆಯನ್ನು ಮತ್ತು ಡಾಂಭಿಕ ಸಾಹಿತಿಗಳನ್ನು ವಿಡಂಬಿಸುತ್ತಾ ವಿಮರ್ಶಿಸುತ್ತಾರೆ.

ಒಟ್ಟಾರೆ ಹೇಳುವುದಾದರೆ, ಕನ್ನಡ ಚಳುವಳಿಯನ್ನು ಗಟ್ಟಿಗೊಳಿಸುವಲ್ಲಿ, 'ಅಕ್ಷರ ಪ್ರಕಾಶನ'ದ ಮೂಲಕ ಪ್ರಕಟಗೊಳ್ಳುತ್ತಿದ್ದ 'ಸಾಕ್ಷಿ' ಪತ್ರಿಕೆಯ ಪಾತ್ರ ಐತಿಹಾಸಿಕವಾಗಿ ಬಹಳ ಮಹತ್ವವಾದುದಾಗಿದೆ. ಮತ್ತು ಈ ಪತ್ರಿಕೆಯ ಪ್ರಭಾವದಿಂದ 'ಶೂದ್ರ' ಎಂಬ ಮತ್ತೊಂದು ಪತ್ರಿಕೆಯು ಹುಟ್ಟಿಕೊಂಡಿತು ಎಂಬುದನ್ನು ನೆನೆದರೆ ಇದರ ಪ್ರಾಮುಖ್ಯತೆ ಮನದಟ್ಟಾಗುತ್ತದೆ. "ಕನ್ನಡಕ್ಕೆ 'ಸಾಕ್ಷಿ'ಯನ್ನು ಕೊಟ್ಟವರು ಸುಬ್ಬಣ್ಣನವರು. ಗೋಪಾಲಕೃಷ್ಣ ಅಡಿಗರ ಸಂಪಾದಕತ್ವದಲ್ಲಿ ಬರುತ್ತಿದ್ದ ಈ ತ್ರೈಮಾಸಿಕ ಪತ್ರಿಕೆ ಹೊಸ ಹೊಸ ಆಲೋಚನಾ ಕ್ರಮಗಳಿಗೆ ದಾರಿ ಕೊಟ್ಟಂಥದ್ದು. ಇಲ್ಲಿ ನಡೆದ ಆರೋಗ್ಯಪೂರ್ಣವಾದ ವಾಗ್ವಾದಗಳನ್ನು ನಮ್ಮ ಸಿನಿಕಮಂದಿ ಈಗಲೂ ಸಾಕ್ಷಿಯ ಪುಟಗಳನ್ನು ತಿರುವಿ ನೋಡಬೇಕಾಗಿದೆ. ಇಂಥ ಪತ್ರಿಕೆಯಿಂದ ಬೆಳೆದದ್ದರಿಂದ 'ಶೂದ್ರ'ವನ್ನು ತರಲು ಸಾಧ್ಯವಾಯಿತು"[೩೪] ಎಂದು ಶೂದ್ರ ಶ್ರೀನಿವಾಸ್‌ರವರು ಒಂದೆಡೆ ಹೆಮ್ಮೆ, ಅಭಿಮಾನದಿಂದ ಹೇಳಿಕೊಳ್ಳುತ್ತಾರೆ.

ಪುಸ್ತಕ ಸಂಸ್ಕೃತಿಯನ್ನು ಶ್ರೀಮಂತಗೊಳಿಸುವಲ್ಲಿ 'ಅಕ್ಷರ ಪ್ರಕಾಶನ'ವು ಶ್ರಮಿಸುತ್ತಿರುವ ರೀತಿ ಅಭಿನಂದನಾರ್ಹವಾದುದು. ೧೯೫೭ರ ಸುಮಾರಿನಲ್ಲಿ ಸ್ಥಾಪನೆಗೊಂಡ 'ಅಕ್ಷರ ಪ್ರಕಾಶನ'ವು ರಾಜ್ಯ ಮತ್ತು ರಾಷ್ಟ್ರ ಹಾಗೂ ವಿಶ್ವಕ್ಕೆ ಸಂಬಂಧಪಟ್ಟ ಪ್ರಖ್ಯಾತ ಸಾಹಿತಿಗಳು, ಲೇಖಕರು ಮತ್ತು ವಿದ್ವಾಂಸರ ಕೃತಿಗಳನ್ನು ಪ್ರಕಟಿಸುತ್ತಿತ್ತು. 'ನೀನಾಸಮ್ ರಂಗ ಶಿಕ್ಷಣ ಕೇಂದ್ರ'ದ ಸಲುವಾಗಿ ಅನ್ಯಭಾಷೆಗಳಿಂದ ಹಲವಾರು ಕೃತಿಗಳನ್ನು

---

೩೩ ಗೋಪಾಲಕೃಷ್ಣ ಅಡಿಗ (ಸಂ.), ಸಾಕ್ಷಿ, ೯ನೇ ಸಂಚಿಕೆ, ಅಕ್ಷರ ಪ್ರಕಾಶನ, ಸಾಗರ, ಶರತ್ ಸಂಚಿಕೆ, ೧೯೭೦, ಪು.೪.

೩೪ ಮಹಾಬಲೇಶ್ವರ ಭಟ್ಟ, ಟಿ. (ಸಂ.), ರಂಗಧಾಮ, ಶ್ರೀ. ಕೆ.ವಿ. ಸುಬ್ಬಣ್ಣ ಅಭಿನಂದನ ಗ್ರಂಥ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೫, ಪು.೧೦೪.

ಕನ್ನಡಕ್ಕೆ ತರಬೇಕಾದ ಅನಿವಾರ್ಯತೆ, ಅಗತ್ಯ ಎದುರಾಯಿತು. ಏಕೆಂದರೆ ನೀನಾಸಮ್ ರಂಗಶಿಕ್ಷಣ ಕೇಂದ್ರವು ಕನ್ನಡ ಭಾಷೆಯಲ್ಲಿ ಶಿಕ್ಷಣವನ್ನು ಕೊಡುತ್ತಿತ್ತು. ಹಾಗಾಗಿ ರಂಗಭೂಮಿ, ನಾಟ್ಯಶಾಸ್ತ್ರ, ನಟನೆ ಮತ್ತು ಸಿನಿಮಾ ಮುಂತಾದವುಗಳಿಗೆ ಸಂಬಂಧಿಸಿದ ಅಗತ್ಯ ಪುಸ್ತಕಗಳನ್ನು ಕನ್ನಡದಲ್ಲಿ ತರಲಾಯಿತು. ಈ ರೀತಿ ಅನುವಾದ ಕೃತಿಗಳ ಪ್ರಕಟಣೆಗೆ 'ಅಕ್ಷರ ಪ್ರಕಾಶನ'ವು ತನ್ನನ್ನು ಮೀಸಲುಗೊಳಿಸಿಕೊಡಿತ್ತು.

ಗೋಪಾಲಕೃಷ್ಣ ಅಡಿಗರು, ಯು.ಆರ್. ಅನಂತಮೂರ್ತಿ ಪಿ. ಲಂಕೇಶ್ ಮತ್ತು ಚಿಂತಕರಾದ ಡಿ.ಆರ್. ನಾಗರಾಜ್–ಮೊದಲಾದ ಮಹತ್ವದ ಬರಹಗಾರರ ಕೃತಿಗಳನ್ನು 'ಅಕ್ಷರ ಪ್ರಕಾಶನ'ವೆ ಪ್ರಕಟಿಸಿತು ಮತ್ತು ಬಿ.ಆರ್. ಲಕ್ಷಣರಾವ್‌ರವರ 'ಗೋಪಿ ಮತ್ತು ಗಾಂಡಲೀನ' ಹಾಗೂ ಶಾಲಿನಾಥ ರಘುನಾಥರವರ 'ಸಮನ್ವಿತ' ಮುಂತಾದ ಹೊಸ ಪೀಳಿಗೆಯ ಬರಹಗಾರರ ಮೊದಲ ಕೃತಿಗಳನ್ನು ಪ್ರಕಟಿಸಿದ ಹೆಮ್ಮೆ 'ಅಕ್ಷರ ಪ್ರಕಾಶನ'ಕ್ಕಿದೆ. ಇಂತಹ ಕೃತಿಗಳ ಪ್ರಕಟನೆಯಿಂದ 'ಅಕ್ಷರ ಪ್ರಕಾಶನ'ವು ಆರ್ಥಿಕವಾಗಿ ಸುಖವನ್ನೇನೂ ಉಣ್ಣಲಿಲ್ಲ. ಪಾರಂಭದಲ್ಲಿ 'ಅಕ್ಷರ ಪ್ರಕಾಶನ'ವು ಸುಮಾರು ೧೫ ಲಕ್ಷ ರೂಗಳನ್ನು ಕಳೆದುಕೊಳ್ಳಬೇಕಾಯಿತು ಎಂದು ಜಿ. ರಾಜಶೇಖರರವರು ಹೇಳುತ್ತಾರೆ. ಇಷ್ಟೆಲ್ಲಾ ಆದರೂ ಪುಸ್ತಕ ಸಂಸ್ಕೃತಿಯನ್ನು ಬೆಳೆಸುವಲ್ಲಿ 'ಅಕ್ಷರ ಪ್ರಕಾಶನ'ಕ್ಕಿದ್ದ ಅಚಲವಾದ ಶ್ರದ್ಧೆ, ನಿಷ್ಠೆಯನ್ನು ನೆನೆಯಲೇಬೇಕು.

ಡಿ.ಆರ್. ನಾಗರಾಜ್‌ರವರ ಸ್ಥಾಪಕ ಸಂಪಾದಕತ್ವದಲ್ಲಿ 'ಅಕ್ಷರ ಚಿಂತನ ಮಾಲೆ'ಯನ್ನು ಆರಂಭಿಸಲಾಯಿತು. 'ಅಕ್ಷರ ಪ್ರಕಾಶನ'ದ ಮುಖ್ಯ ಗುರಿಯೆಂದರೆ ಡಿ.ಆರ್.ರವರು ಹೇಳುವಂತೆ, 'ಸಮಾಜಕ್ಕೆ ವಿಚಿತ್ರ ರೀತಿಯಲ್ಲಿ ವಿಸ್ಮೃತಿ ಆವರಿಸಿರುತ್ತದೆ. ನಮ್ಮ ಸಮಾಜ, ಸಂಸ್ಕೃತಿಯೊಳಗೆ ಗರ್ಭೀಕರಿಸಿಕೊಂಡಿರುವ ಚಿಂತನಾಕ್ರಮಗಳು ನೆನೆಗುದಿಗೆ ಬಿದ್ದಿವೆ. ಹಾಗಾಗಿ ನಾವುಗಳು ನಮ್ಮ ಚಿಂತನಾಕ್ರಮಗಳು ಪಶ್ಚಿಮಮುಖಿಯಾಗಿ ರೂಪುಗೊಂಡಿವೆಯಾದ್ದರಿಂದ, ವಿಸ್ಮಯಗಳನ್ನು ಮೀರಿ ನಮ್ಮ ಚಿಂತನಾಕ್ರಮಗಳನ್ನು ಅಳವಡಿಸಿಕೊಳ್ಳಬೇಕು' ಎಂಬುದೇ ಆಗಿದೆ.

ಡಿ.ಆರ್.ರವರು 'ಅಕ್ಷರ ಚಿಂತನ ಮಾಲೆ' ಯೋಜನೆಯ ಕುರಿತು "ವ್ಯಕ್ತಿಗಳು, ಚಳುವಳಿಗಳು, ಆಲೋಚನಾ ಪ್ರಸ್ಥಾನಗಳು, ಬಿಡಿ ಕೃತಿಗಳು ಹಾಗೂ ಅನುವಾದಗಳು, ಸ್ವತಂತ್ರ ಕೃತಿಗಳು, ವ್ಯಾಖ್ಯಾನಗಳು ಹೀಗೆ ವಿವಿಧ ಹರಿಹಿನಲ್ಲಿ ಈ ಪುಸ್ತಕಮಾಲೆ ಬರಲಿದೆ"[೩೫] ಎಂದು ಹೇಳುತ್ತಾರೆ. ಒಟ್ಟಾರೆ ಕನ್ನಡದ ಮೂಲಕವೇ ಪ್ರಪಂಚದ ಸಮಗ್ರವನ್ನು ಗ್ರಹಿಸಿಕೊಳ್ಳಬೇಕು ಎಂಬ ತಾತ್ತ್ವಿಕ ನಿಲುವು ಅಕ್ಷರ ಪ್ರಕಾಶನದ ಸಂಸ್ಥೆಗೆ ಇದೆಯೆಂದು ಡಿ.ಆರ್. ಮಾತುಗಳ ಮೂಲಕ ತಿಳಿಯಬಹುದು.

ಸುಬ್ಬಣ್ಣನವರ ನಿಧನದ ನಂತರವೂ 'ಅಕ್ಷರ ಪ್ರಕಾಶನ' ಸಂಸ್ಥೆಯು ಮೊದಲಿನಂತೆ ಈಗಲೂ ಕ್ರಿಯಾಶೀಲವಾಗಿದೆ ಎಂಬುದಕ್ಕೆ ಉತ್ತಮ ನಿದರ್ಶನವೆಂದರೆ, ಇತ್ತೀಚೆಗೆ 'ಮೊದಲ ಓದು' ಎಂಬ ಮಾಲಿಕೆಯಲ್ಲಿ ಪ್ರಕಟಣೆಗೊಂಡ ಪುಸ್ತಕಗಳು. 'ಪಂಪನ ಆದಿ ಪುರಾಣ ಪ್ರವೇಶ', 'ಜನ್ನನ ಯಶೋಧರ ಚರಿತ್ರೆ ಪ್ರವೇಶ', 'ಕುವೆಂಪು ಅವರ ಆಯ್ದ ಕವಿತೆಗಳು', 'ಗೋಪಾಲಕೃಷ್ಣ ಅಡಿಗರ ಆಯ್ದ ಕವಿತೆಗಳು', 'ಚಂದ್ರಶೇಖರ ಕಂಬಾರ ಅವರ ಆಯ್ದ ಕವಿಕೆಗಳು', 'ಎ.ಕೆ. ರಾಮಾನುಜನ್ ಅವರ ಆಯ್ದ ಕವಿತೆಗಳು',

---

[೩೫] ಷೆಲ್ಡಾನ ಪೊಲಾಕ್, ವಿಶ್ವಾತ್ಮಕ ದೇಶಭಾಷೆ, ಅನು: ಕೆ.ವಿ. ಅಕ್ಷರ, ಅಕ್ಷರ ಪ್ರಕಾಶನ, ಸಾಗರ, ೨೦೦೩, ಪು.೧.

'ಯು.ಆರ್. ಅನಂತಮೂರ್ತಿ ಅವರ ಆಯ್ದ ಕಥೆಗಳು', 'ಪಿ. ಲಂಕೇಶ್ ಅವರ ಆಯ್ದ ಕಥೆಗಳು', 'ಡಿ.ವಿ.ಜಿ. ಅವರ ಆಯ್ದ ಬರಹಗಳು', 'ಗೌರೀಶ ಕಾಯ್ಕಿಣಿ ಅವರ ಆಯ್ದ ಬರಹಗಳು', 'ಕೀರ್ತಿನಾಥ ಕುರ್ತಕೋಟಿಯವರ ಆಯ್ದ ಬರಹಗಳು' ಮತ್ತು ಡಿ.ಆರ್. ನಾಗರಾಜ್‌ರವರ ಆಯ್ದ ಬರಹಗಳು' ಮೊದಲಾದ ನೂರ ಎಂಟು ಪುಟಗಳುಳ್ಳ ಇಪ್ಪತ್ತೈದು ಪುಸ್ತಕಗಳನ್ನು ಮೊದಲ ಕಂತಿನಲ್ಲಿ ಪ್ರಕಟಿಸಲಾಗಿದೆ.

ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ ಕವಿಗಳ, ಲೇಖಕರ ಹಾಗೂ ಚಿಂತಕರ ಪುಸ್ತಕಗಳನ್ನು ಪ್ರಕಟಿಸಲಾಗಿದೆ. ಇಲ್ಲಿ ಕಾವ್ಯ, ಕಥೆಗಳು ಹಾಗೂ ವೈಚಾರಿಕ ಬರಹಗಳನ್ನೊಳಗೊಂಡ ಪುಸ್ತಕಗಳಿವೆ. ಕನ್ನಡ ಸಾಹಿತ್ಯಕ್ಕೆ ಪ್ರವೇಶ ಮಾಡಲಿಚ್ಛಿಸುವ ಹೊಸ ಓದುಗರನ್ನು ಪ್ರಮುಖ ದೃಷ್ಟಿಯನ್ನು ಇರಿಸಿಕೊಂಡು, ಅಕ್ಷರ ಪ್ರಕಾಶನವು 'ಮೊದಲ ಓದು' ಎಂಬ ಮಾಲಿಕೆಯನ್ನು ಆರಂಭಿಸಿದೆ.

ಒಟ್ಟಿನಲ್ಲಿ 'ಅಕ್ಷರ ಪ್ರಕಾಶನ'ವು ಪುಸ್ತಕ ಸಂಸ್ಕೃತಿಯ ಅಭಿರುಚಿಯನ್ನು ಬೆಳೆಸುವಲ್ಲಿ ಮಹತ್ವವಾದ ಪಾತ್ರವನ್ನು ವಹಿಸುತ್ತಿದೆ ಎಂದು ಹೇಳಬಹುದು.

ಅಧ್ಯಾಯ–೩

# ರಂಗಭೂಮಿ, ನಾಟಕ ಮತ್ತು ಸಿನೆಮಾ ಕುರಿತು ಸುಬ್ಬಣ್ಣನವರ ಚಿಂತನೆಗಳು, ಸಮುದಾಯ ಪ್ರಜ್ಞೆ ಮತ್ತು ಸುಬ್ಬಣ್ಣನವರ ಚಿಂತನೆಗಳು ಹಾಗೂ ಕೋಮುವಾದ ಗ್ರಹಿಕೆಯನ್ನು ಕುರಿತ ಅವರ ಮುಖ್ಯ ಚಿಂತನೆಗಳು

ಅಧ್ಯಾಯ-೩

# ರಂಗಭೂಮಿ, ನಾಟಕ ಮತ್ತು ಸಿನೆಮಾ ಕುರಿತು ಸುಬ್ಬಣ್ಣನವರ ಚಿಂತನೆಗಳು, ಸಮುದಾಯ ಪ್ರಜ್ಞೆ ಮತ್ತು ಸುಬ್ಬಣ್ಣನವರ ಚಿಂತನೆಗಳು ಹಾಗೂ ಕೋಮುವಾದ ಗ್ರಹಿಕೆಯನ್ನು ಕುರಿತ ಅವರ ಮುಖ್ಯ ಚಿಂತನೆಗಳು

## ಅ) ರಂಗಭೂಮಿ, ನಾಟಕ ಮತ್ತು ಸಿನೆಮಾ ಕುರಿತು ಸುಬ್ಬಣ್ಣನವರ ಚಿಂತನೆಗಳು :

ಸುಬ್ಬಣ್ಣನವರು ನಾಟಕ, ರಂಗಭೂಮಿ ಮತ್ತು ಸಿನೆಮಾ ಮಾಧ್ಯಮಗಳಲ್ಲಿ ತಮ್ಮನ್ನು ಕ್ರಿಯಾಶೀಲವಾಗಿ ತೊಡಗಿಸಿಕೊಂಡಿದ್ದವರು. ಹೀಗಾಗಿ ಅವರ ಮಾತುಗಳು ಅಧಿಕೃತತೆಯನ್ನು ಪಡೆದುಕೊಂಡಿರುತ್ತವೆ ಎಂದು ಹೇಳಬಹುದು. ನಾಟಕದ ಬಗೆಗೆ ನಿರ್ದಿಷ್ಟವಾದ ನಿರ್ವಚನ, ಸ್ವರೂಪದ ಕುರಿತು ಮೊದಲಿನಿಂದಲೂ ಗೊಂದಲ ಇದ್ದದ್ದೇ ಒಂದು ನಾಟಕ ಕೃತಿಯು ನಾಟಕವೆನಿಸಿಕೊಳ್ಳಬೇಕಾದರೆ ಅದು ರಂಗರೂಪದ ಪ್ರಕ್ರಿಯೆಗೊಳಪಡಬೇಕು ಎಂಬ ಅಭಿಪ್ರಾಯ ಈಗಲೂ ಇದೆ. ಇಂತಹ ಅಭಿಪ್ರಾಯ ಭೇದಗಳಿಗೆ ಒಂದು ನಿರ್ದಿಷ್ಟ ಪರಿಕಲ್ಪನೆಯನ್ನು ಮೂಡಿಸಲು ಸುಬ್ಬಣ್ಣನವರು ಯತ್ನಿಸುತ್ತಾರೆ.

ಕಾವ್ಯ, ಕಾದಂಬರಿ ಮತ್ತು ಕತೆಗಳಂತೆಯೇ ನಾಟಕವನ್ನು ಸಹ ಸಾಹಿತ್ಯ ಪ್ರಕಾರವೆಂದೇ ಗುರುತಿಸಲಾಗುತ್ತದೆ. ಆದರೆ ಕಾವ್ಯ, ಕಾದಂಬರಿ ಮತ್ತು ಕತೆಗಳನ್ನು ಸ್ವತಂತ್ರ ಕೃತಿಗಳು ಎಂದು ಪರಿಗಣಿಸಿದಂತೆ, ನಾಟಕವನ್ನು ಸ್ವತಂತ್ರಕೃತಿ ಎಂದು ಮಾನ್ಯ ಮಾಡುವಲ್ಲಿ ಎಲ್ಲರಲ್ಲೂ ಒಮ್ಮತದ ಅಭಿಪ್ರಾಯವಿಲ್ಲ. ಇದಕ್ಕೆ ಪ್ರಮುಖ ಕಾರಣ ಲಿಖಿತ ನಾಟಕವು ರಂಗದ ಮೇಲೆ ಪ್ರದರ್ಶನಗೊಳ್ಳುವುದರಿಂದ ಅದರ ನಿರ್ವಚನ, ಸ್ವರೂಪ ಸ್ಪಷ್ಟಗೊಳ್ಳದೆ ಇರುವುದು ನಾಟಕದ ನಿರ್ದಿಷ್ಟ ಸ್ವರೂಪಕ್ಕೆ ಸಂಬಂಧಿಸಿದಂತೆ ಲಿಖಿತ ನಾಟಕಕ್ಕೂ ಹಾಗೂ ಆ ನಾಟಕವನ್ನು ರಂಗದ ಮೇಲೆ ತರುವ ನಿರ್ದೇಶಕನಿಗೂ ಇರುವ ಭಿನ್ನತೆಯೆ ಗೊಂದಲಕ್ಕೆ ಎಡೆಮಾಡಿಕೊಟ್ಟಿದೆ. ಸುಬ್ಬಣ್ಣನವರು ಇವೆರಡರ ನಡುವಿನ ಭಿನ್ನತೆಗಳಿಗೆ ಒಂದು ಸ್ಪಷ್ಟ ಪರಿಕಲ್ಪನೆಯನ್ನು ಕಂಡುಕೊಳ್ಳಲು ಯತ್ನಿಸುತ್ತಾರೆ.

ಲಿಖಿತ ನಾಟಕವು ರಂಗರೂಪಕ್ಕೊಳಪಟ್ಟಾಗ ಮಾತ್ರವೇ ಅದು ನಾಟಕವೆನಿಸಿಕೊಳ್ಳಲು ಅರ್ಹ ಎಂಬ ವಾದಕ್ಕೆ ವಿರುದ್ಧವಾದ ನಿಲುವೊಂದನ್ನು ಮಂಡಿಸುತ್ತಾರೆ. ಸುಬ್ಬಣ್ಣನವರು ತಮ್ಮ ವಾದದ ಸಮರ್ಥನೆಗಾಗಿ ಗ್ರೀಕ್ ನಾಟಕಕಾರರಾದ ಸೊಫೋಕ್ಲಿಸ್, ಈಸ್ಕೃಲಸ್ ಮತ್ತು ಯೂರಿಪಿಡಿಸ್-ಮೊದಲಾದವರನ್ನು ಹೆಸರಿಸುತ್ತಾರೆ. ಅವರ ಪ್ರಕಾರ, "ನಾವು ಗಮನಿಸಬೇಕಾದ್ದು ಸಾಹಿತ್ಯ ಕೃತಿಯೆನಿಸಿಕೊಳ್ಳಲು ಅರ್ಹವಾಗಿರುವ ಲಿಖಿತ ನಾಟಕದ ಬಗ್ಗೆ. ಅದು ಸ್ವತಂತ್ರವಲ್ಲ ಎಂಬ ಸಂದೇಹ ಯಾಕೆ? ಕಾದಂಬರಿಯಂಥ ಭಾಷಾಬಂಧ ಸ್ವತಂತ್ರವಿರಲು ಸಾಧ್ಯವಿದ್ದರೆ ನಾಟಕದಂಥ ಭಾಷಾಬಂಧಕ್ಕೂ ಸ್ವತಂತ್ರವಿರಲು ಸಾಧ್ಯವಿರಬೇಕಲ್ಲ. ಗದ್ಯವಾಕ್ಯಗಳಿಂದ ಕಟ್ಟಿದ ಸಾಹಿತ್ಯಕೃತಿಗಳಿದ್ದಾವೆ, ವರ್ಣನೆ ಸಂಭಾಷಣೆಗಳಿಂದ ಕಟ್ಟಿದ ಕೃತಿಗಳಿದ್ದಾವೆ, ಪದ್ಯಗಳಲ್ಲಿ ಒಂದೇ ಥರದ ಪದ್ಯ ಬಂಧಗಳಲ್ಲೂ ಅನೇಕ ಪದ್ಯಬಂಧಗಳಲ್ಲೂ ಕಟ್ಟಿದವಿದ್ದಾವೆ, ಗದ್ಯಪದ್ಯ ಮಿಶ್ರಣದಿಂದ ಕಟ್ಟಿದವಿದ್ದಾವೆ, ಪ್ರಥಮ ಪುರುಷದಲ್ಲಿ ಕಥೆ ಹೇಳಿಕೊಳ್ಳುವಂಥವಿದ್ದಾವೆ. ಅವೆಲ್ಲ ಸ್ವಸಂಪೂರ್ಣ ಸ್ವತಂತ್ರ ಇರಬಲ್ಲವು ಎಂದಾದರೆ, ಅದೇ ಪ್ರಕಾರ, ಸಂಭಾಷಣೆಗಳನ್ನೇ ಬಳಸಿ ಕಟ್ಟಿದ ಈ ಬಂಧವೂ

ಸ್ವತಂತ್ರವಿರಲು ಸಾಧ್ಯವಾಗಬೇಕಲ್ಲವೆ?"[೧] ಎಂದು ನೇರವಾಗಿಯೇ, ಸ್ಪಷ್ಟವಾಗಿ ಹೇಳಿಬಿಡುತ್ತಾರೆ. ಅಂದರೆ ಒಂದು ಲಿಖಿತ ನಾಟಕವನ್ನು ರಂಗರೂಪಕ್ಕೆ ಅಳವಡಿಸಲಾಗುತ್ತದೆ ಎಂಬ ಒಂದೇ ಕಾರಣಕ್ಕಾಗಿ ಲಿಖಿತ ನಾಟಕವು ಸ್ವತಂತ್ರಕೃತಿಯಲ್ಲ ಎಂಬ ವಾದವನ್ನು ಅವರು ಒಪ್ಪುವುದಿಲ್ಲ. ನಾಟಕವೂ ಅದೊಂದು ಸ್ವಯಂ ಕಲಾಕೃತಿ ಎಂದು ಸಾಧಿಸುತ್ತಾರೆ.

"ನಾಟಕವನ್ನು ಅದರ ಪ್ರದರ್ಶನ ರೂಪು ನೋಡದೇ ಬರೇ ಸಾಹಿತ್ಯ' ಕೃತಿಯಾಗಿ ನೋಡುವುದಾದರೆ ಅದು ಸಾಹಿತ್ಯ ಕೃತಿಯೇ ಅಲ್ಲ"[೨] ಎಂಬ ಎಲಿಯೆಟ್‌ನ ಮಾತನ್ನು ಡಾ. ಜಯಪ್ರಕಾಶ್ ಮಾವಿನಕುಳಿಯವರು ಬಳಸಿಕೊಂಡು ಸುಬ್ಬಣ್ಣನವರ ವಾದವನ್ನು ನಿರಾಕರಿಸುತ್ತಾರೆ. ಮಾವಿನಕುಳಿಯವರು ಒಂದು ನಾಟಕವು ಪ್ರದರ್ಶನಗೊಂಡಾಗ ಅದನ್ನು ನೋಡುವ ಬಹುಸಂಖ್ಯಾತ ಪ್ರೇಕ್ಷಕರನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಮಾತನಾಡುವುದರಿಂದ ಅವರ ವಾದಕ್ಕೆ ಅರ್ಥವತ್ತಾದ ಸಮರ್ಥನೆ ಸಾಧ್ಯವಿಲ್ಲ. ಒಂದು ಕೆಟ್ಟ ಸಾಹಿತ್ಯ ಕೃತಿಯನ್ನು ರಂಗರೂಪ ಪ್ರಕ್ರಿಯೆಗೆ ಅಳವಡಿಸುವುದರ ಮೂಲಕ ಅದನ್ನು ಒಳ್ಳೆಯದಾಗಿ ಪ್ರದರ್ಶಿಸಬಹುದು ಎಂಬ ಅವರ ವಾದದಲ್ಲಿ ಯಾವುದೇ ರೀತಿಯ ಹುರುಳಿಲ್ಲ.

ಮಾವಿನಕುಳಿಯವರು ನಾಟಕವೂ ಒಂದು ಸ್ವತಂತ್ರಕೃತಿ ಎಂದು ಒಪ್ಪಿಕೊಳ್ಳುವುದಕ್ಕಿಂತ ರಂಗರೂಪ ಪ್ರಕ್ರಿಯೆಯಲ್ಲಿಯೇ ಅದು ತನ್ನ ಸಾರ್ಥಕ್ಯವನ್ನು ಹೊಂದುತ್ತದೆಯೆಂದು ಸಾಧಿಸುತ್ತಾರೆ. ಅಂದರೆ ನಾಟಕವನ್ನು ರಂಗದ ಮೇಲೆ ತರುವ ನಿರ್ದೇಶಕನ ಸೃಜನಶೀಲತೆ ಅವರಿಗೆ ಹೆಚ್ಚು ಮುಖ್ಯವಾಗುತ್ತದೆ (ಶ್ರೀರಂಗರ ನಂತರ ಪ್ರಾಯಃ ಯಾರೂ ರಂಗನಿರ್ದೇಶನದಲ್ಲಿ ಹಸ್ತಕ್ಷೇಪ ಮಾಡಲಿಲ್ಲವೆನಿಸುತ್ತದೆ). ರಂಗ ನಿರ್ದೇಶಕನು ಲಿಖಿತ ನಾಟಕವನ್ನು ರಂಗದ ಮೇಲೆ ತರುವುದರ ಮೂಲಕ ತನ್ನ ಸೃಜನಶೀಲತೆಯಿಂದ ಅನೇಕ ಮಾರ್ಪಾಡುಗಳನ್ನು ಮಾಡಿಕೊಳ್ಳುತ್ತಾನೆ (ಉದಾ : ಬಿ.ವಿ. ಕಾರಂತರು ನಿರ್ದೇಶಿಸಿದ 'ಸತ್ತವರ ನೆರಳು') ಮತ್ತು ಆ ಮೂಲಕ ಅದನ್ನು ಯಶಸ್ಸುಗೊಳಿಸುತ್ತಾನೆ ಎಂಬ ನಂಬಿಕೆಗೆ ಬದ್ಧರಾದ ಮಾವಿನಕುಳಿಯವರು ತಮ್ಮ ವಾದವನ್ನು ಸಮರ್ಥಿಸಿಕೊಳ್ಳಲು ಯತ್ನಿಸುತ್ತಾರೆ.

ವಿಮರ್ಶಕರಾದ ಆಮೂರರು ವ್ಯಕ್ತಪಡಿಸುವ ಅಭಿಪ್ರಾಯಗಳು ಮಾವಿನಕುಳಿಯವರ ವಾದವನ್ನು ಸಮರ್ಥಿಸುವಂತಿವೆ: "ನಾಟಕವೆಂದೆನಿಸಿಕೊಳ್ಳಬೇಕಾದರೆ ಅದು ರಂಗಭೂಮಿಯನ್ನಾಶ್ರಯಿಸಲೇಬೇಕು" ಎಂದು ಜಿ.ಎಸ್. ಆಮೂರರು ಹೇಳುತ್ತಾರೆ ಮತ್ತು ಅವರ ಪ್ರಕಾರ ನಾಟಕವು ಒಂದು ಸಾಹಿತ್ಯ ಪ್ರಕಾರ ಮಾತ್ರವೆ ಆಗಿರದೆ ಬೇರೆ ಬೇರೆ ಸಂಕಥನಗಳ ಸಂಕೀರ್ಣವಾಗಿದೆ. ನಾಟಕವು ಬರವಣಿಗೆಯ ರೂಪದಲ್ಲಿದ್ದಾಗ ಸಾಹಿತ್ಯ ಪಠ್ಯವಾಗಿರುತ್ತದೆ. ಆದರೆ ನಿಜವಾದ ಅರ್ಥದಲ್ಲಿ ಅದು ನಾಟಕವೆನಿಸಿಕೊಳ್ಳುವುದು ರಂಗಪ್ರದರ್ಶನದ ಮೂಲಕವೇ ಎಂಬ ಅಭಿಪ್ರಾಯ ಆಮೂರರದು.

ಇದೇ ಸಂದರ್ಭದಲ್ಲಿ ಕುರ್ತಕೋಟಿಯವರ ಅಭಿಪ್ರಾಯಗಳನ್ನು ಹೇಳಿಬಿಡಬೇಕು: "ನಾಟಕವೆಂದರೆ ಅರ್ಧ ಸಂಕಥನ ಮತ್ತು ಇನ್ನರ್ಧ ಕ್ರಿಯೆ. ಸಂಕಥನ ಮತ್ತು ಕ್ರಿಯೆ ಇವೆರಡೂ ಕೂಡಿಕೊಂಡು ರಂಗಭೂಮಿಯ

---

೧ ಸುಬ್ಬಣ್ಣ, ಕೆ.ವಿ., ಲೇಖನ ಸಂಕಲನ ೧೯೫೪–೨೦೦೪, ಅರೆಶತಮಾನದ ಅಲೆಬರಹಗಳು, ಸಂಪಾದನೆ, ಟಿ.ಪಿ. ಅಶೋಕ, ಅಕ್ಷರ ಪ್ರಕಾಶನ, ಸಾಗರ, ೨೦೦೪, ಪು.೫೭೪.

೨ ಜಯಪ್ರಕಾಶ್ ಮಾವಿನಕುಳಿ, ರಂಗಪ್ರತಿಸ್ಪಂದನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪು.೧೩೩.

ಪ್ರದರ್ಶನಗೊಂಡಾಗ ಹೊಸ ಶಕ್ತಿಯ ಆವಿರ್ಭಾವವಾಗುತ್ತದೆ. ಮಾತು ಕ್ರಿಯೆಯಷ್ಟು ಶಕ್ತಿಪೂರ್ಣವಾಗಿ, ಕ್ರಿಯೆ ಮಾತಿನಷ್ಟು ಅರ್ಥಪೂರ್ಣವಾಗುತ್ತದೆ. ನಾಟಕವನ್ನು ದೃಶ್ಯಕಾವ್ಯವೆಂದು ಹಿಂದಿನವರು ಬಣ್ಣಿಸಿದರು. ದೃಶ್ಯ ಕಾವ್ಯವಾಗಿ, ಕಾವ್ಯ ದೃಶ್ಯವಾಗುವುದೆಂದರೆ ಇವೆರಡೂ ಕೂಡಿಕೊಂಡು ಮೂರನೆಯ ಒಂದು ಶಕ್ತಿಯಾಗುತ್ತವೆ"[೩] ಎಂದು ಕುರ್ತಕೋಟಿಯವರು ಹೇಳುತ್ತಾರೆ. ಕುರ್ತಕೋಟಿಯವರು ನಾಟಕವನ್ನು ದೃಶ್ಯಕಾವ್ಯ, ಕಾವ್ಯದೃಶ್ಯ ಎಂದು ಹೇಳುವಾಗ, ನಾಟಕವೊಂದು ಸ್ವತಂತ್ರಕೃತಿ ಎಂದು ಒಪ್ಪಿಕೊಂಡಂತಿಲ್ಲ: ರಂಗದ ಮೇಲೆ ಬಂದ ನಂತರವೆ ನಾಟಕವೆನಿಸಿಕೊಳ್ಳಲು ಯೋಗ್ಯ ಎಂಬಂತೆ ಮಾತನಾಡಿದ್ದಾರೆ.

ಮಾವಿನಕುಳಿ, ಆಮೂರ ಮತ್ತು ಕುರ್ತಕೋಟಿ ಈ ಮೂರು ಜನರಿಗಿಂತ ಭಿನ್ನವಾಗಿ ಆಲೋಚಿಸುವ ಗಿರಡ್ಡಿಯವರ ವಾದಗಳು, ಸುಬ್ಬಣ್ಣನವರ ವಾದವನ್ನು ಪುಷ್ಟೀಕರಿಸುವಂತಿವೆ. ಗಿರಡ್ಡಿಯವರ ನಾಟಕ ಹಾಗೂ ರಂಗಪ್ರದರ್ಶನಗಳೆರಡೂ ಭಿನ್ನ ಮಾಧ್ಯಮಗಳೆಂದು ಪರಿಗಣಿಸುತ್ತಾರೆ. ರಂಗದ ಮೇಲೆ ಬಂದ ನಾಟಕಗಳೆಲ್ಲಾ ಶ್ರೇಷ್ಠ ಸಾಹಿತ್ಯ ಕೃತಿಯಾಗುವುದಿಲ್ಲ. ನಾಟಕಕಾರನೂ ತಾನು ನಾಟಕವನ್ನು ರಚಿಸುವುದು ಭಾಷಾ ಮಾಧ್ಯಮಕ್ಕೆ ಹೊರತು ರಂಗಪ್ರದರ್ಶನಕ್ಕಲ್ಲ ಎನ್ನುತ್ತಾರೆ. ಒಂದು ವೇಳೆ ನಾಟಕಕಾರನೂ ರಂಗಪ್ರದರ್ಶನಕೋಸ್ಕರವೇ ತನ್ನ ಸೃಜನಾಶೀಲತೆಯನ್ನು ಮೀಸಲಿರಿಸಿದರೆ ಸಾಹಿತ್ಯ ಮೌಲ್ಯಗಳು ಮುಕ್ಕಾಗುತ್ತವೆ ಎಂದು ಎಚ್ಚರಿಸುತ್ತಾರೆ. ಷೇಕ್ಸ್‌ಪಿಯರ್‌ನ ನಾಟಕಗಳು ಎಂದೆಂದಿಗೂ ಜೀವಂತಾನುಭವವಾಗಿ ಬಾಳುವುದು ಅವು ಸಾಹಿತ್ಯವಾಗಿ ಅರ್ಥಪೂರ್ಣತೆಯನ್ನು ಹೊಂದಿರುವುದರಿಂದಲೇ ಹೊರತು, ರಂಗದ ಮೇಲೆ ಯಶಸ್ವಿಯಾಗಿ ಪ್ರದರ್ಶನಗೊಂಡವು ಎಂಬ ಕಾರಣಕ್ಕಾಗಿಯಲ್ಲ ಎಂಬುದಾಗಿ ಹೇಳುತ್ತಾರೆ.

ಗಿರಡ್ಡಿಯವರಿಗೆ ನಾಟಕ-ಚಲನಚಿತ್ರಗಳಂತೆ, ಕಾದಂಬರಿ-ಚಲನಚಿತ್ರಗಳಂತೆ ನಾಟಕ-ರಂಗ ಪ್ರದರ್ಶನಗಳೂ ಸಹ ಎರಡೂ ಭಿನ್ನ ಮಾಧ್ಯಮಗಳೇ ಆಗಿವೆ. ನಾಟಕವನ್ನು ದೃಶ್ಯಕಾವ್ಯ ಎಂದು ಕರೆಯುತ್ತ ಬಂದಿರುವ ಬಗೆಗೆ ಅವರು ಮಹತ್ವ ಕೊಡುವುದಿಲ್ಲ.

ಗಿರಡ್ಡಿಯವರು ಅಂತಿಮವಾಗಿ ಪ್ರತಿಪಾದಿಸುವುದು ಇದನ್ನು : "ರಂಗದ ಮೇಲೆ ಹುಟ್ಟುವ ಸೃಜನಶೀಲವಾದ ಕ್ರಿಯೆಗಿಂತ ಓದಿದಾಗ ಮನಸ್ಸಿನೆದುರು ಮೂಡುವ ಕ್ರಿಯೆ ಹೇಗೆ ಕಡಿಮೆ ಸೃಜನಶೀಲವಾಗುತ್ತದೆ?"[೪] ಮತ್ತು "ಲೇಖಕವಾಗಿ ನಾಟಕಕಾರ ಮೂಲಭೂತವಾಗಿ ವಿಧೇಯನಾಗಿರಬೇಕಾದ್ದು ರಂಗಪ್ರದರ್ಶನಕ್ಕಲ್ಲ, ಭಾಷಾ ಮಾಧ್ಯಮಕ್ಕೆ; ನಾಟಕವನ್ನು ಸಾಹಿತ್ಯವಾಗಿ ಶ್ರೇಷ್ಠವಾಗಿಸುವ ಅರ್ಥಪೂರ್ಣ ಅನುಭವದ ಸ್ವಯಂಪೂರ್ಣ ಅಭಿವ್ಯಕ್ತಿಗೆ"[೫] ಎಂಬುದಾಗಿದೆ.

ಮೂಲತಃವಾಗಿ ಭಾಷೆ ಒಂದು ಕಲಾಕೃತಿಯನ್ನು ನಿರ್ಮಿಸುವ ಮಾಧ್ಯಮವೆಂದಾಗ, ಮಾವಿನಕುಳಿ, ಆಮೂರ ಮತ್ತು ಕುರ್ತಕೋಟಿಯವರ ವಾದಗಳನ್ನು ಒಪ್ಪಿಕೊಳ್ಳುವುದು ಕಷ್ಟ. ಏಕೆಂದರೆ ಕಾವ್ಯ, ಕತೆ ಮತ್ತು ಕಾದಂಬರಿ ಇವೆಲ್ಲವೂ ಭಾಷೆಯಿಂದ ಸೃಷ್ಟಿಗೊಂಡ ಕಲಾಕೃತಿಗಳೇ ಆಗಿವೆ. ಅದೇ ರೀತಿ ನಾಟಕವೂ ಸಹ

---

[೩] ಕೀರ್ತಿನಾಥ ಕುರ್ತಕೋಟಿ, ರಾಜಕೀಯ ಮತ್ತು ಧರ್ಮ, ಮನೋಹರ ಗ್ರಂಥಮಾಲಾ, ಧಾರವಾಡ, ೨೦೦೩, ಪು.೩೮.

[೪] ರಂಗಧಾಮ, ಶ್ರೀ. ಕೆ.ವಿ. ಸುಬ್ಬಣ್ಣ ಅಭಿನಂದನ ಗ್ರಂಥ, ಸಂಪಾದಕ, ಟಿ. ಮಹಾಬಲೇಶ್ವರ ಭಟ್ಟ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೫, ಪು.೩೧೦.

[೫] ಅದೇ, ಪು.೩೧೬.

[illegible] ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಭಾಷಾಬಂಧದಿಂದಲೇ ಕಲಾಕೃತಿಯಾಗಿರುವಂಥದ್ದು. ಇವೆಲ್ಲವೂ ಸಾಹಿತ್ಯದ ವಿವಿಧ ಪ್ರಕಾರಗಳೇ ಆಗಿವೆ. ಹಿಂದಿನಿಂದಲೂ ನಾಟಕವನ್ನು ರಂಗರೂಪ ಪ್ರಕ್ರಿಯೆಗೆ ಅಳವಡಿಸುವ ಪರಿಪಾಠ ಬೆಳೆದುಬಂದಿದೆ. ಆದರೆ ಇತ್ತೀಚೆಗೆ ಕೇವಲ ನಾಟಕವನ್ನು ಮಾತ್ರವಲ್ಲದೆ ಕತೆಗಳು ಮತ್ತು ಕಾದಂಬರಿಗಳನ್ನು ರಂಗರೂಪಕ್ಕೆ ತರುವ ಪರಿಪಾಠ ಬೆಳೆಯುತ್ತಿದೆ. ಇಲ್ಲೊಂದು ಸಮಸ್ಯೆಯೇಳುತ್ತದೆ: ನಾಟಕವು ರಂಗಪ್ರದರ್ಶನಗೊಳ್ಳದೆ ಸ್ವತಂತ್ರ ಕೃತಿಯಾಗಲಾರದು ಎಂದು ವಾದಿಸುವವರು, ಮುಂದೊಂದು ದಿನ ಕತೆ, ಕಾದಂಬರಿಯು ರಂಗದ ಮೇಲೆ ಬಂದ ನಂತರವೇ ಸ್ವತಂತ್ರಕೃತಿಗಳಾಗಲು ಅರ್ಹ ಎಂಬುದಾಗಿ ವಾದಿಸಿದರೆ ಗತಿಯೇನು? ಎಂದು.

ಸುಬ್ಬಣ್ಣನವರು ಸಾಮಾನ್ಯವಾಗಿ ಯಾರೂ ಗಮನಿಸದ ಅಥವಾ ಎಲ್ಲರಿಗಿಂತ ಭಿನ್ನವಾದ ಒಂದು ಅಂಶದ ಬಗ್ಗೆ ಬೆಳಕು ಚೆಲ್ಲುತ್ತಾರೆ. ಸಾಹಿತ್ಯಕೃತಿ –ರಂಗಪ್ರದರ್ಶನಗಳು ಕಲಾತ್ಮಕವಾಗಿ ಒಂದಕ್ಕೊಂದು ಪೂರಕ ಎಂಬ ಮಾತನ್ನು ಆಡುತ್ತಾರೆ. ರಂಗಕೃತಿಯನ್ನು ಕಟ್ಟಬೇಕಾದರೆ ಅದಕ್ಕೆ ಸಾಹಿತ್ಯ ಕೃತಿ ಅತ್ಯವಶ್ಯಕ. ರಂಗರೂಪಕ್ಕೊಳಪಡದೆ ಆ ಸಾಹಿತ್ಯ ಕೃತಿ (ನಾಟಕ)ಯ ಯಶಸ್ಸು, ಶ್ರೇಷ್ಠವಾಗಬಹುದು. ಆದರೆ ಸಾಹಿತ್ಯ ಕೃತಿಯಿಲ್ಲದೆ ರಂಗರೂಪ ಪ್ರಕ್ರಿಯೆ ಯಶಸ್ವಾಗಲು ಸಾಧ್ಯವಿಲ್ಲ ಎನ್ನಬಹುದು. ಸುಬ್ಬಣ್ಣನವರು ಹೇಳುವಂತೆ, "ಸೋಫೋಕ್ಲಿಸ್, ಕಾಲಿದಾಸ, ಶೇಕ್ಸ್‌ಪಿಯರ್ ಯಾರೇ ಇರಲಿ, ಎಲ್ಲರಿಗೂ ರಂಗಕೃತಿ ಒಂದು ಯೋಗ್ಯ ತಂತ್ರವನ್ನು ಕೊಟ್ಟಿತಲ್ಲದೆ, ಅವರು ರಂಗದಲ್ಲಿ ಸಾರ್ಥಕ್ಯ ಪಡೆಯಲೆಂದು ಭಾಷೆಯಲ್ಲಿ ಕಲಾಕೃತಿಯ ಅಪೂರ್ಣಾವತಾರವನ್ನು ಸೃಷ್ಟಿಸಿಡಲಿಲ್ಲ"[೬] ಎಂಬ ಮಾತುಗಳನ್ನು ನೆನಪಿನಲ್ಲಿಡಬೇಕು.

ಒಟ್ಟಾರೆ ಹೀಗೆ ಹೇಳಬಹುದು: ನಾಟಕವು ಸಹ ಇತರ ಸಾಹಿತ್ಯ ಪ್ರಕಾರಗಳಂತೆ ಭಾಷೆಯ ಮೂಲಕವಾಗಿಯೇ ನಡೆಯುವ ಸೃಜನಶೀಲಕ್ರಿಯೆ. ನಾಟಕವು ರಂಗದ ಮೇಲೆ ಪ್ರದರ್ಶನಗೊಂಡೆ ಅರ್ಥವಾಗಬೇಕೆಂದೇನಿಲ್ಲ; ಓದಿಕೊಂಡಾಗಲೂ ಅದು ಅರ್ಥವಾಗುತ್ತದೆ. ವ್ಯೆಯಕ್ತಿಯ ಖಾಸಗಿ ಓದು ಅರ್ಥಪೂರ್ಣತೆಯನ್ನೊಂದಿರುತ್ತದೆ. ಗಿರಡ್ಡಿಯವರು ಹೇಳುವಂತೆ, ". . .ಒಂದೆ ಸನ್ನಿವೇಶ ಓದಿದಾಗ ಮತ್ತು ಆಡಿದಾಗ ಹೀಗೆ ಬೇರೆ ಬೇರೆ ಅರ್ಥಕೊಡುವ ಕಾರಣವೇನು? ಮತ್ತು ಓದಿದಾಗಿನ ಅರ್ಥ ಆಡಿದಾಗ, ಆಡಿದಾಗಿನ ಅರ್ಥ ಓದಿದಾಗ ಯಾಕೆ ಗಮನಕ್ಕೆ ಬರುವುದಿಲ್ಲ? ಎಂಬುದು"[೭] ಮುಖ್ಯವಾಗುತ್ತದೆ.

ಒಟ್ಟಂದದಲ್ಲಿ ನಾಟಕವು ಸ್ವಯಂಪೂರ್ಣವಾದ ಸ್ವತಂತ್ರ ಕಲಾಕೃತಿಯಾಗಿದ್ದು, ರಂಗರೂಪ ಪ್ರಕ್ರಿಯೆಗೆ ಒಳಪಡದೆಯೂ ಶ್ರೇಷ್ಠ ಕೃತಿಯಾಬಹುದು.

130243

ಸುಬ್ಬಣ್ಣನವರ 'ಲೋಕ ಶಾಕುಂತಲ' ರಂಗಪ್ರಯೋಗಗಳಲ್ಲೇ ಅತಿಮುಖ್ಯವಾದದ್ದು, ಕಾಳಿದಾಸನ 'ಅಭಿಜ್ಞಾನ ಶಾಕುಂತಲ'ವನ್ನು ಆಧರಿಸಿ ಕಟ್ಟಿದ 'ಲೋಕಶಾಕುಂತಲ'ವು ಪುನರ್‌ಸೃಷ್ಟಿಯಾಗಿ ರೂಪು ತಳೆದಿದೆ. ಸಂಸ್ಕೃತಿಗಳ ಭಿನ್ನತೆ, ಅವುಗಳ ಮುಖಾಮುಖಿ ಮತ್ತು ಪರ್ಯಾಯ ಸಾಂಸ್ಕೃತಿಕ ಹುಡುಕಾಟಗಳನ್ನು ಕೈಗೊಳ್ಳಲಾಗಿದೆ. ನೀನಾಸಂನ ಪ್ರಮುಖೋದ್ದೇಶವೇ 'ಪರ್ಯಾಯಾ ಸಾಂಸ್ಕೃತಿಕ ಹುಡುಕಾಟ'ವಾಗಿರುವಾಗ ಇಂತಹ ಕೃತಿಗಳನ್ನು ಆಯಾಯಾ ಕಾಲ ಘಟ್ಟಗಳಲ್ಲಿಟ್ಟು ಅವಲೋಕಿಸುವುದು ಅಗತ್ಯವೇ ಆಗಿದೆ.

---

೬ ಸುಬ್ಬಣ್ಣ, ಕೆ.ವಿ., ಲೇಖನ ಸಂಕಲನ ೧೯೫೪–೨೦೦೪, ಅರೆಶತಮಾನದ ಅಲೆಬರಹಗಳು, ಸಂಪಾದನೆ: ಟಿ.ಪಿ. ಅಶೋಕ, ಅಕ್ಷರ ಪ್ರಕಾಶನ, ಸಾಗರ, ೨೦೦೪, ಪು.೫೬೭.

೭ ಮಹಾಬಲೇಶ್ವರ ಭಟ್ಟ, ಟಿ. (ಸಂ.), ರಂಗಧಾಮ, ಶ್ರೀ.ಕೆ.ವಿ. ಸುಬ್ಬಣ್ಣನವರ ಅಭಿನಂದ ಗ್ರಂಥ, ಸಪ್ನ ಬುಕ್ ಹೌಸ್, ಬೆಂಗಳೂರು, ಪು.೩೧೪.

ಅಶ್ವಘೋಷನಿಂದ ಆರಂಭವಾದ ಸಂಸ್ಕೃತ ನಾಟಕ ಚರಿತ್ರೆಗೆ ಸುದೀರ್ಘ ಕಾಲದ ಇತಿಹಾಸವಿದೆ. ಭಾಸ, ಭವಭೂತಿ, ವಿಶಾಖದತ್ತ ಮತ್ತು ಶ್ರೀಹರ್ಷ ಮೊದಲಾದವರೆಲ್ಲರಿಗಿಂತಲೂ ಕಾಳಿದಾಸನು ಅಗ್ರಪಂಕ್ತಿಯಲ್ಲಿ ರಾರಾಜಿಸುತ್ತಾನೆ. ಆತನ 'ವಿಕ್ರಮೋರ್ವಶಿಯ', 'ಮಾಳವಿಕಾಗ್ನಿಮಿತ್ರ', 'ಋತುಸಂಹಾರ', 'ಮೇಘದೂತ' 'ಕುಮಾರಸಂಭವ' ಹಾಗೂ 'ರಘುವಂಶ' ಇವೆಲ್ಲ ಕೃತಿಗಳಿಗಿಂತಲೂ 'ಅಭಿಜ್ಞಾನ ಶಾಕುಂತಲ'ವು ಕಾಳಿದಾಸನಿಗೆ ಅತಿ ಹೆಚ್ಚು ಕೃತಿ, ಮನ್ನಣೆಯನ್ನು ತಂದುಕೊಟ್ಟಿತು ಮತ್ತು ಆತನ ಕೃತಿಗಳಲ್ಲೇ 'ಅಭಿಜ್ಞಾನ ಶಾಕುಂತಲ'ವು ಶ್ರೇಷ್ಠವೆಂದು ಪರಿಗಣಿತವಾಗಿದೆ.

ಕಾಳಿದಾಸನು 'ಅಭಿಜ್ಞಾನ ಶಾಕುಂತಲ'ದಲ್ಲಿ ಅಡಗಿಸಿಟ್ಟಿರುವ ಪರಸ್ಪರ ಸಂಸ್ಕೃತಿಗಳ ಭಿನ್ನತೆ ಮತ್ತು ಅವುಗಳ ನಿರ್ಲಿಪ್ತತೆ, ಸ್ಮೃತಿ, ವಿಸ್ಮೃತಿಗಳ ಆಟ, ರಾಜತ್ವವು ಮಾನತ್ವವಾಗಿ ರೂಪುಗೊಳ್ಳುವ ತಾಕಲಾಟ, ಸ್ತ್ರೀಸಮುದಾಯದ ಅವಜ್ಞೆ, ಸಮುದಾಯದ ಆತಂಕ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಚರಿತ್ರೆಯಲ್ಲಿ ಸುವರ್ಣಯುಗವೆಂದು ಪರಿಗಣಿಸಲ್ಪಟ್ಟ 'ಗುಪ್ತ ಯುಗ'ದ ಸಾಂಸ್ಕೃತಿಕ ವಿಮರ್ಶೆಯಿದೆ. ಸುಬ್ಬಣ್ಣನವರು ಕಾಳಿದಾಸ ಕಟ್ಟಿಕೊಡುವ ಗುಪ್ತಸಾಮ್ರಾಜ್ಯದ ಹಿನ್ನೆಲೆಯಲ್ಲಿ ತನ್ನ ಕಾಲದ ವಾಸ್ತವತೆಯನ್ನು ಶೋಧಿಸಿಕೊಳ್ಳುತ್ತಾರೆ. ಪ್ರಭುತ್ವ, ಹಿಂಸೆ, ಶೋಷಣೆ ಮುಂತಾದ ಅಮಾನವೀಯ ಕ್ರೌರ್ಯತೆಗಳನ್ನು ಅನಾವರಣಗೊಳಿಸಲು ಯತ್ನಿಸುತ್ತಾರೆ. ಎಲ್ಲಕ್ಕಿಂತ ಹೆಚ್ಚಾಗಿ ಮನುಷ್ಯ ಸಂಬಂಧಗಳಲ್ಲಿನ ಮಾನವೀಯತೆಯ ಕೊರತೆ ಅವರನ್ನು ಹೆಚ್ಚು ಭಾದಿಸುತ್ತದೆ.

ಸುಬ್ಬಣ್ಣನವರು ರಂಗಪ್ರಯೋಗಗಕ್ಕಷ್ಟೇ ತಮ್ಮ ಗಮನವನ್ನು ಕೇಂದ್ರೀಕರಿಸದೆ, ಕಾಳಿದಾಸನ ಕೃತಿಗಳ ಮರು ವಿಮರ್ಶೆಯನ್ನು ಕೈಗೊಳ್ಳುತ್ತಾರೆ. ಹಾಗಾಗಿ ಇದೊಂದು ಸಾಹಿತ್ಯ ವಿಮರ್ಶೆಯೂ ಆಗುತ್ತದೆ. ಅವರು 'ಅಭಿಜ್ಞಾನ ಶಾಕುಂತಲ'ವನ್ನು ಅಧ್ಯಯನ ಮಾಡಿ ಗ್ರಹಿಸಿಕೊಂಡಿದ್ದನ್ನು ಹೀಗೆ ಹೇಳಿಕೊಳ್ಳುತ್ತಾರೆ.

"ವ್ಯಾಸನಲ್ಲಿ ಬರುವ ಶಾಕುಂತಲೋಪಾಖ್ಯಾನ ಮುಖ್ಯವಾಗಿ, ರಾಜಪರಂಪರೆಯೊಂದನ್ನು ದಾಖಲಿಸಿಕೊಡುವ ವಂಶಾವಳಿಯ ಭಾಗ. ಕ್ರಾನಿಕಲ್ ಎನ್ನಬಹುದಾದಂಥ ವಾಸ್ತು ಅದರದ್ದು, ಕಾಲಿದಾಸನ ನಾಟಕ ಅದಕ್ಕೆ ಭಿನ್ನವಾಗಿ, ರಾಜ್ಯ-ಸಾಮ್ರಾಜ್ಯದ ರಾಜಕೀಯ ವ್ಯವಸ್ಥೆಯಲ್ಲಿ ರೂಪುಗೊಂಡ ಜೀವನ ಕ್ರಮವೊಂದನ್ನು ಅ ಭಿತ್ತಿಯಲ್ಲಿ ವಿನ್ಯಾಸಗೊಂಡಿರುವ ಹೆಣ್ಣು ಗಂಡಿನ ಸಂಬಂಧಗಳನ್ನು ಪಡಿಮೂಡಿಸಿ ಕೊಡುತ್ತದೆ."[೮]

ಬಹುತೇಕ ವಿಮರ್ಶಕರೆಲ್ಲಾ 'ದೂರ್ವಾಸ ಶಾಪ ಪ್ರಸಂಗ'ವನ್ನೇ ಮುಖ್ಯ ಮಾಡಿಕೊಂಡು ಕಾಲಿದಾಸನ ಅನನ್ಯತೆಯನ್ನು, ಮಹತ್ವವನ್ನು ಗುರುತಿಸಿದ್ದು ಸುಬ್ಬಣ್ಣನವರಿಗೆ ಒಪ್ಪಿಗೆಯಾಗಲಿಲ್ಲ. ಹಾಗಾಗಿ ಕಾಲಿದಾಸನನ್ನು ಹೊಸ ಬೆಳಕಿನಲ್ಲಿ ಮರುವಿಮರ್ಶೆಗೆ ಒಡ್ಡಿಕೊಳ್ಳುತ್ತಾರೆ. ಸುಬ್ಬಣ್ಣನವರ ಅನನ್ಯತೆಯಿರುವುದು. ಇತರರಿಗಿಂತ ಭಿನ್ನವಾಗಿ ನಿಂತು ಚಿಂತಿಸುವುದರಲ್ಲಿ (ಉದಾಹರಣೆಗೆ : 'ಕವಿರಾಜಮಾರ್ಗ', 'ಪಂಪ' ಮತ್ತು 'ಶ್ರೇಷ್ಠತೆ'ಯ ಪರಿಕಲ್ಪನೆ ಇತ್ಯಾದಿ) ಕಾಲಿದಾಸನು ಮಹಾಭಾರತದ ಶಕುಂತಳೋಪಾಖ್ಯಾನದಿಂದ ಎತ್ತಿಕೊಂಡು, 'ಅಭಿಜ್ಞಾನ ಶಾಕುಂತಲ'ವನ್ನು ಯಾವ್ಯಾವ ರೀತಿಯ ಹೊಸ ಪರಿವೇಷದಲ್ಲಿ ಕೆತ್ತಿ ಕಲಾಕೃತಿಯನ್ನು ಮೂಡಿಸಿದ್ದಾನೆ

---

೮ ಸುಬ್ಬಣ್ಣ, ಕೆ.ವಿ., ಲೇಖನ ಸಂಕಲನ ೧೯೫೪-೨೦೦೪, ಅರೆಶತಮಾನದ ಅಲೆಬರಹಗಳು, ಸಂಪಾದನೆ- ಟಿ.ಪಿ. ಅಶೋಕ, ಅಕ್ಷರ ಪ್ರಕಾಶನ, ಸಾಗರ, ೨೦೦೪, ಪು.೬೧೧.

ಎಂಬುದು ಅವರಿಗೆ ಮುಖ್ಯವಾಗುತ್ತದೆ ಮತ್ತು ಆ ಮೂಲಕ ಆತನ ಮಹತ್ವತೆ, ಅನನ್ಯತೆಯನ್ನು ಸ್ಪಷ್ಟಗೊಳಿಸಿಕೊಳ್ಳಲು ಸಾಧ್ಯವಾಗುತ್ತದೆ ಎಂಬುದು ಸುಬ್ಬಣ್ಣನವರ ಗ್ರಹಿಕೆಯಾಗಿದೆ.

"ಅನುಭವವೆನ್ನುವುದು ವ್ಯಕ್ತಿಯದೇ ಎನ್ನಿಸಿದರೂ ಅದು ರೂಪುಗೊಳ್ಳುವುದು ಆಯಾ ವಿಶಿಷ್ಟ ಪರಿಸರ ಹಾಗೂ ವಿಶಿಷ್ಟ ವ್ಯಕ್ತಿತ್ವಗಳ ಪರಸ್ಪರ ಸಂಘರ್ಷ ಸಮ್ಮೇಳನಗಳಿಂದ ಅಲ್ಲವೆ? ಕಾಲಿದಾಸನ ನಾಟಕದ ನಕ್ಷೆ ಅದನ್ನೇ ಸೂಚಿಸುತ್ತದೆ. ಭಿನ್ನ ಸಂಸ್ಕೃತಿಗಳ ಮಧ್ಯೆ ತನ್ನದನ್ನು ಸಂಗೋಪಿಸಿಕೊಂಡು ಬಾಳಲು ಸ್ಪರ್ಧಿಸಿ ನಿಂತಿರುವ ಹಸ್ತಿನಾವತಿಯ ರಾಜತ್ವ; ಈ ರಾಜತ್ವದ ಆರ್ಯ ನಾಗರೀಕ ಸಂಸ್ಕೃತಿಯ ವಿಶಿಷ್ಟ ಭಿತ್ತಿಯಲ್ಲಿ ವಿನ್ಯಸ್ತಗೊಂಡಿರುವ ಶಕುಂತಲೆ – ದುಷ್ಯಂತರ (ಹೆಣ್ಣು–ಗಂಡಿನ) ಪ್ರೀತಿಯ ಕಥೆ– ಇದು ನಕ್ಷೆ"[೯] ಎಂದು ಸುಬ್ಬಣ್ಣನವರು ಕಾಲಿದಾಸನ ಕೃತಿಯ ಕುರಿತು ಹೇಳುತ್ತಾರೆ. ಅಂದರೆ ಕಾಲಿದಾಸನ ಎರಡು ಭಿನ್ನ ಸಂಸ್ಕೃತಿಗಳ ವೈಶಿಷ್ಟ್ಯವನ್ನು ಕಟ್ಟಿಕೊಡುತ್ತಾನೆ ಮತ್ತು ರಾಜತ್ವವು ಮಾನವೀಕರಣಗೊಳ್ಳುವ ಪ್ರಕ್ರಿಯೆಯನ್ನು, ಗಂಡು–ಹೆಣ್ಣಿನ ಸಂಬಂಧಗಳ ಪ್ರೇಮದ ಆವಿಷ್ಕಾರ ಮತ್ತು ಅದರ ಸ್ವರೂಪಗಳನ್ನು ಶೋಧಿಸಿಕೊಳ್ಳಲು ಕಾಲಿದಾಸನು ಯತ್ನಿಸುತ್ತಾನೆ.

ಸುಬ್ಬಣ್ಣನವರು 'ಅಭಿಜ್ಞಾನ ಶಾಕುಂತಲ'ವನ್ನು 'ಲೋಕ ಶಾಕುಂತಲ' ಎಂಬುದಾಗಿ ಶೀರ್ಷಿಕೆಯನ್ನು ಬದಲಾವಣೆ ಮಾಡಿಕೊಂಡಿರುವುದನ್ನು ಗಮನಿಸಬೇಕಾಗುತ್ತದೆ. ಶಕುಂತಲೆಯ ಜನನವೇ ವಿಶೇಷತೆಯಿಂದ ಕೂಡಿರುವಂಥದ್ದು. ಅವರೇ ಹೇಳುವಂತೆ, ಸ್ವರ್ಗ–ಮರ್ತ್ಯಗಳ ಶಿಶುವಾಗಿ ಆಕೆ ಜನಿಸಿದ್ದಾಳೆ. ಶಕುಂತಲೆ ಮುಗ್ಧೆ ಮತ್ತು ಅಷ್ಟೇ ನಿರ್ಮಲವಾದವಳು. ಅವಳ ಸ್ವಚ್ಛಂದ ಪ್ರೇಮವೇ ಆಕೆಗೆ ನೋವನ್ನು ತಂದುಕೊಟ್ಟದ್ದು ದುರಂತ. ಆದರೂ ಶಕುಂತಲೆ ಪುರುಷ ನಿರ್ಮಿಸುವ ಸಂಕಥನಗಳ ವಿರುದ್ಧದ ಧ್ವನಿಯಾಗಿ ಬಾಳಿದಳೆಂಬುದನ್ನು ಮರೆಯುವಂತಿಲ್ಲ.

ಕಾಲಿದಾಸನ 'ಶಾಕುಂತಲ' ಮತ್ತು 'ಯಕ್ಷಗಾನ'ದ ಪರಿಕರಗಳನ್ನು ಹೆಕ್ಕಿಕೊಂಡು, ಹೊಸದಾದ 'ಲೋಕ ಶಾಕುಂತಲ'ವನ್ನು ತಮ್ಮದೇ ಕಾಲದ ಕೃತಿಯನ್ನಾಗಿಸಿದ್ದಾರೆ. ಯಕ್ಷಗಾನದ ವಿನ್ಯಾಸವನ್ನು 'ಲೋಕ ಶಾಕುಂತಲ'ಕ್ಕೆ ಅಳವಡಿಸಿಕೊಂಡದ್ದು ಪ್ರಮುಖವಾಗಿದೆ. ಸುಬ್ಬಣ್ಣನವರಿಗೆ ಯಕ್ಷಗಾನದ ಸ್ವರೂಪದ ಬಗ್ಗೆ ವಿಶೇಷವಾದ ಕಾಳಜಿಯಿದೆ. ಯಕ್ಷಗಾನದ ಭಿನ್ನತೆಯನ್ನು ಗುರುತಿಸುವುದು ಅದರ ವಿಶೇಷವಾದ ('ನಿರ್ದೇಶಕ– ಭಾಗವತರ ನಿರಂತರ ನಿಯಂತ್ರಣ') ತಂತ್ರದ ಮೂಲಕವೇ ಅದು ಹೆಚ್ಚು ಜನಪ್ರಿಯವಾಗಿರುವುದನ್ನು ಅದರ ಸರಳತೆಯ ಮೂಲಕ ಗುರುತಿಸಿಕೊಳ್ಳುತ್ತಾರೆ ಮತ್ತು ಪ್ರಾಚೀನದಿಂದಲೂ ಯಕ್ಷಗಾನ ಪರಂಪರೆಯು ಜನ ಜೀವನದಲ್ಲಿ ಹಾಸುಹೊಕ್ಕಾಗಿರುವುದನ್ನು ಗುರುತಿಸಿಕೊಂಡು ಏಕಕಾಲಕ್ಕೆ ವಿಸ್ಮಯ, ಆನಂದ ಮತ್ತು ಹೆಮ್ಮೆ ವ್ಯಕ್ತಪಡಿಸುತ್ತಾರೆ. ಹೀಗೆಂದು ಹೇಳಿದ ಮಾತ್ರಕ್ಕೆ ಯಕ್ಷಗಾನವೇ ಉಳಿದೆಲ್ಲ ಪ್ರಕಾರಗಳಿಗಿಂತ ಶ್ರೇಷ್ಠ ಎಂದು ತಿಳಿಯಬೇಕಿಲ್ಲ. ಯಕ್ಷಗಾನದ ಮಿತಿಗಳನ್ನು ಅವರು ಗುರುತಿಸಬಲ್ಲರು.

ಮೂಲ ನಾಟಕವಾದ 'ಅಭಿಜ್ಞಾನ ಶಾಕುಂತಲ'ಕ್ಕಿಂತ ಭಿನ್ನವಾದ ಬದಲಾವಣೆಗಳನ್ನು 'ಲೋಕ ಶಾಕುಂತಲ'ದಲ್ಲಿ ಮಾಡಲಾಗಿದೆ. ಸೂತ ವಿದೂಷಕ, ಆಶ್ರಮವಟುಗಳು, ಕಂಚುಕಿ ಮತ್ತು ಚೇಟಿಯರು ಮುಂತಾದ ಪಾತ್ರಗಳನ್ನು ಹಿಗ್ಗಿಸಿ (ಬೆಳೆಸಿ)ಕೊಂಡಿದ್ದಾರೆ. ಹಾಗೂ ಕೆಲವನ್ನು ಹೊಸದಾಗಿ ಸೇರಿಸಿಕೊಂಡು,

---

೯ ಅದೇ, ಪು.೬೧೩.

ಮೂಲ ನಾಟಕದ ಕೆಲವು ಭಾಗಗಳನ್ನು ಕೈಬಿಡಲಾಗಿದೆ. ಒಟ್ಟು, ಸುಬ್ಬಣ್ಣನವರು, ಸಾಮಾನ್ಯನ ದೃಷ್ಟಿಯಲ್ಲಿ ಕಾಲಿದಾಸನ ನಾಟಕವನ್ನು ಸಾಮಾಜಿಕ ಸಂದರ್ಭದಲ್ಲಿಟ್ಟು ಪರಿಶೀಲಿಸುತ್ತಾರೆ. ಅತ್ಯಂತ ಪ್ರಾಚೀನ ಕೃತಿಯೊಂದನ್ನು ವರ್ತಮಾನಕ್ಕೆ ತಂದು, ಆ ಮೂಲಕ ಸಮಕಾಲೀನ ಸಂದರ್ಭವನ್ನು ಸಾಮಾನ್ಯನ ಮೂಲಕ ವಿಮರ್ಶಿಸಿಕೊಳ್ಳುವುದೇ ಆಗಿದೆ. ಹೊಸದಾದ ಮಾರ್ಪಾಡುಗಳನ್ನು ತನ್ನ ಕಾಲಕ್ಕೆ ಹೇಗೆ ಬೇಕೋ ಹಾಗೆ ರಚನಾತ್ಮಕವಾಗಿ ವಿಸ್ತರಿಸಿಕೊಂಡಿದ್ದಾರೆ. ಸುಬ್ಬಣ್ಣವರು ಹೇಳುವಂತೆ :

"ಪುನಾರಾಚಿತ ನಾಟಕಕ್ಕೆ ಲೋಕ ಶಾಕುಂತಲ ಎಂಬ ಹೆಸರು ಕೊಟ್ಟೆ – ಇದು ಶಾಕುಂತಲದ ಪರಿಸರ ಪ್ರಪಂಚವನ್ನು ಖಚಿತಗೊಳಿಸಲು ಯತ್ನಿಸುವಂಥದು; ಶಾಕುಂತಲದ ಹಿನ್ನೆಲೆಯ ಜನವರ್ಗಗಳ ನೆಲೆಯಿಂದ ಮುಖ್ಯವಾಗಿ ಒಟ್ಟಿನ ಅರ್ಥವಂತಿಕೆಯನ್ನು ಹುಡುಕುವಂಥದ್ದು; ಜಾನಪದ ಶೈಲಿ ಬಳಸಿಕೊಂಡು ಜಾನಪದ ಮುಖ್ಯವಾದದ್ದು ಇತ್ಯಾದಿ ಅಂಶಗಳನ್ನು ವಿಜ್ಞಾಪಿಸಿಕೊಡಲು ಎಂಬ ಆಶೆಯಿಂದ"[೧೦] ಎಂಬ ಅವರ ಈ ಮಾತುಗಳು ಜೊತೆಗೆ, ಪ್ರಜಾಪ್ರಭುತ್ವದ ಆದರ್ಶಗಳು, ಅದರ ಹುಸಿ ನಡಾವಳಿಕೆಗಳು, ಗ್ರಾಮ್ಯ ಮತ್ತು ನಗರ ಕೇಂದ್ರ ಪ್ರಜ್ಞೆಗಳು, ಇಲ್ಲಿನ ಸಮೃದ್ಧತೆ, ಸರಳತೆ, ತ್ಯಾಗಜೀವನ ಹಾಗೂ ಆಕ್ರಮಣಶೀಲತೆ, ದಯೆ, ಸಹನೆ, ಸ್ಮೃತಿ–ವಿಸ್ಮೃತಿ ಮೊದಲಾದವುಗಳನ್ನು ಶೋಧಿಸಿಕೊಳ್ಳಲು ಯತ್ನಿಸುತ್ತಾರೆ ಎಂದು ಹೇಳಬಹುದು.

ಇಲ್ಲಿ ಯಕ್ಷಗಾನವನ್ನು ಬಳಸಿಕೊಂಡಿದ್ದರ ಕುರಿತು ಇನ್ನೊಂದು ಮಾತನ್ನು ಹೇಳಬೇಕು. ಸಾಂಪ್ರದಾಯಿಕವಾಗಿ ಯಕ್ಷಗಾನದಲ್ಲಿರುವಂತೆ ನಾಟಕದ ಮೊದಲಿನಿಂದ ಕೊನೆಯ ತನಕ ಹಾಡುಗಳನ್ನು ಯಕ್ಷಗಾನದ ಶೈಲಿಯಲ್ಲಿಯೇ ಬಳಸಿಕೊಳ್ಳಲಾಗಿದೆ. ನಾಟಕದಲ್ಲಿ ಪಾತ್ರಗಳಿಗೆ ಯಕ್ಷಗಾನದಲ್ಲಿ ನಿರ್ವಹಿಸುವಂತಹ ವೇಷ– ವರ್ಣಿಕೆಗಳನ್ನು, ಅಲಂಕಾರ ವೇಷ–ಭೂಷಣಗಳನ್ನು ಮತ್ತು ಅದರ ಸರಳವಾದ ರಂಗಸಜ್ಜಿಕೆ, ಪರಿಕರಗಳು ಮೊದಲಾದವುಗಳನ್ನು ಬಳಸಿಕೊಂಡು 'ಲೋಕ ಶಾಕುಂತಲ'ವನ್ನು ಪ್ರದರ್ಶಿಸಲಾಗಿದೆ.

ಒಟ್ಟಾರೆ ನೀನಾಸಂನ ರಂಗಪ್ರಯೋಗಗಳಿಗೆಂದೆ ಸುಬ್ಬಣ್ಣನವರು ಅನೇಕ ರೀತಿಯ ಸೃಜನಶೀಲ ಸಾಹಸಗಳನ್ನು ಮಾಡುತ್ತ ಬಂದರು. ಅವರ 'ಲೋಕ ಶಾಕುಂತಲ' ಯಾವುದೇ ರೀತಿಯ ವಿವಾದಗಳನ್ನು ಸೃಷ್ಟಿಸಿದ್ದರು, ಅದರ ಪ್ರಯೋಗ ಸ್ವಾಗತಾರ್ಹ. ಸುಬ್ಬಣ್ಣನವರೇ ಹೇಳುವಂತೆ ಕನ್ನಡ ರಂಗಭೂಮಿ ಪರಂಪರೆಯು ಸ್ವೈರಣೆಯನ್ನೊಂದಿದ್ದು ಯಾವುದನ್ನೇ ಆಗಲಿ ಮುಕ್ತತೆಯಿಂದ ಸ್ವೀಕರಿಸುತ್ತದೆ ಮತ್ತು ಮೂಲದ ಕುರಿತು ತಲೆಕೆಡಿಸಿಕೊಳ್ಳದೆ ಮೌಲ್ಯವುಳ್ಳದ್ದು ಎನಿಸಿದ್ದನ್ನು ಯಾವುದೇ ನೆಲೆಯಿಂದಲೂ ಬೇಕಾದರೂ ಸ್ವೀಕರಿಸುವ ಗುಣವನ್ನೊಂದಿದೆ. ಹಾಗಾಗೆ ಪಾಶ್ಚಾತ್ಯ ನಾಟಕ (ಬ್ರೆಕ್ಟ್)ಗಳನ್ನು ಕೂಡ ಕನ್ನಡಕ್ಕೆ ತಂದರು. 'ಮೇಘದೂತ', 'ಸಂಗ್ಯಾಬಾಳ್ಯಾ', 'ಜಯಂಟ್ ಮೊಮಾ' ಮತ್ತು 'ಅಂಚೆಮನೆ' (ಮಕ್ಕಳ ನಾಟಕಗಳು), 'ಮಣ್ಣಿನ ಬಂಡಿ', 'ಊರುಭಂಗ', 'ಜಂರಝಾವಾತ', 'ಹ್ಯಾಮ್ಲೆಟ್' ಮತ್ತು 'ಘಾಸಿರಾಂ ಕೊತ್ವಾಲ್' ಮೊದಲಾದ ೨೨ ನಾಟಕಗಳನ್ನು ಅನುವಾದ ಮತ್ತು ರೂಪಾಂತರಗಳ ಮೂಲಕ ರಂಗ ನಿರ್ದೇಶನವನ್ನು ಸುಬ್ಬಣ್ಣನವರು ಮಾಡಿದರು. ಅಂದರೆ ಉತ್ತಮವಾದದ್ದನ್ನು ಜನಸಮುದಾಯಕ್ಕೆ ಕೊಡಬೇಕೆಂಬ ಸುಬ್ಬಣ್ಣನವರ ಪ್ರಧಾನ ಕಾಳಜಿ, ಎಲ್ಲರಲ್ಲೂ ಹೊಸ ಸಂವೇದನೆಯನ್ನು ರೂಪಿಸಿತು, ಪ್ರಜ್ಞೆ ವಿಕಾಸಗೊಳ್ಳುವಂತೆ ಮಾಡಿತು. ಇಂತಹ

[೧೦] ಅದೇ, ಪು.೬೨೧.

ಅವರ ತಾತ್ತ್ವಿಕ ನಿಲುವುಗಳೇ ಸುಬ್ಬಣ್ಣನವರ ಪ್ರೇರಣೆಗಳನ್ನು, ಸ್ಫೂರ್ತಿಯನ್ನು ತಿಳಿಸಿಕೊಡುತ್ತದೆ ಎಂದು ತಿಳಿದಿದ್ದೇನೆ.*

**ಸಿನೆಮಾ :**

ಕಳೆದ ಶತಮಾನದಲ್ಲಿ ರೂಪುಗೊಂಡ ಸಿನೆಮಾ 'ಹೊಸಭಾಷೆ'ಯಾಗಿ ಸುಬ್ಬಣ್ಣನವರಿಗೆ ಕಂಡಿದೆ. ವೃತ್ತಪತ್ರಿಕೆ, ರೇಡಿಯೋ, ಪುಸ್ತಕ ಮೊದಲಾದೆಲ್ಲ ;ಸಮೂಹ ಸಂಪರ್ಕ ಮಾಧ್ಯಮ'ಗಳಿಗಿಂತ ಸಿನೆಮಾ ವಿಶಿಷ್ಟವಾದುದಾಗಿದೆ ಮತ್ತು ಸಿನೆಮಾದ ಮತ್ತೊಂದು ವಿಶೇಷತೆಯೆಂದರೆ: ಅದು ನೂತನವಾಗಿ ಜನ್ಮ ತಳೆತಾಗಲೇ ವೈಜ್ಞಾನಿಕ ಮತ್ತು ಯಾಂತ್ರಿಕ ಸಾಧನಗಳ ಶಿಶುವಾಗಿ, 'ಸಮೂಹ ಮಾಧ್ಯಮ'ವಾಗಿ ಮೈದಾಳಿಕೊಂಡಿದೆ ಎಂಬುದು ಸಿನೆಮಾದ ಹೆಗ್ಗಳಿಕೆ ಎಂದು ಸುಬ್ಬಣ್ಣನವರು ಹೇಳಿಕೊಳ್ಳುತ್ತಾರೆ.

'ಸಿನೆಮಾ' ಮಾಧ್ಯಮವು ಉಳಿದೆಲ್ಲ ಮಾಧ್ಯಮಗಳಿಗಿಂತಲೂ, ಜನರ ಹತ್ತಿರಕ್ಕೆ ಹೋಗುವಂಥದ್ದು. ಅದಕ್ಕಿಂತ ಹೆಚ್ಚಾಗಿ ಸುಬ್ಬಣ್ಣನವರಿಗೆ ಚಲನೆಯ ದಾಖಲೆಯಾಗಿ ಜನ್ಮ ತಾಳಿದ ಸಿನೆಮಾವು ಪ್ರಬುದ್ಧ ಭಾಷೆಯಾಗಿ, ವಿವಿಧ ರೀತಿಯ ಗಂಭೀರವಾದ ಅಭಿವ್ಯಕ್ತಿಗಳಿಗೆ ಸಮರ್ಥಮಾಧ್ಯಮವಾಗಿ ಬೆಳೆದು ಬಂದ ಬಗೆಯನ್ನು, ಅದರ ವಿಶಿಷ್ಟತೆಯೆಂದು ಗುರುತಿಸಿಕೊಳ್ಳುತ್ತಾರೆ. ಮನೋರಂಜನೆಯ ಉದ್ಯಮವಾಗಿ ಸಿನೆಮಾ ಬೆಳೆಯುವುದರ ಬಗೆಗೆ ಅವರಿಗೆ ಆಸಕ್ತಿಯಿಲ್ಲ, ಖೇದವಿದೆ. ಸಿನೆಮಾವನ್ನು ಗಂಭೀರ ಮಾಧ್ಯಮ ಎಂದು ಆಸಕ್ತಿ ತಾಳುವುದು, ಅದರ ಕಲಾತ್ಮಕತೆಯಿಂದ ಕೂಡಿದ ಅಭಿವ್ಯಕ್ತಿಗೆ ಹೊರತು, ರಂಜನೆಗಾಗಿಯಲ್ಲ. ಸ್ವೀಡನ್ ದೇಶದಲ್ಲಿ, ಸೆಲ್ಮಾ ಲಾಗೆರ್ ಲೋಫ್ ಎಂಬ ಕಾದಂಬರಿಕಾರ್ತಿಯು, ತನ್ನ ಖ್ಯಾತ ಕೃತಿಗಳನ್ನು ಸಿನೆಮಾ ಮಾಡಲು ಕೊಟ್ಟದ್ದು, ಚಲನಚಿತ್ರವು ಕಲಾಮಾಧ್ಯಮವಾಗಿ ಬಳಕೆಯಾಗಬಲ್ಲದೆಂಬುದನ್ನು ಮನಗಂಡೆ ಎಂಬ ಅಂಶವನ್ನು ಸುಬ್ಬಣ್ಣನವರು ಗುರುತಿಸುತ್ತಾರೆ.

ಸುಬ್ಬಣ್ಣನವರು ಕನ್ನಡಕ್ಕೆ ತಂದಿರುವ ಹಲವಾರು ಚಿತ್ರಲೇಖನಗಳನ್ನು ಗಮನಿಸಿದರೆ ಅವರ ಆಯ್ಕೆಗಳ ಹಿಂದಿರುವ ಸಿನೆಮಾ ಗ್ರಹಿಕೆಗಳು, ದೃಷ್ಟಿಕೋನಗಳು ನಮಗೆ ಗೊತ್ತಾಗಿಬಿಡುತ್ತವೆ. ಉದಾಹರಣೆಗೆ – 'ರಶೊಮೋನ್', 'ಬೈಸಿಕಲ್ ಥೀವ್ಸ್', 'ಹಿರೋಷಿಮಾ ಮಾನ್ ಅಮೋರ್', 'ಇವಾನ್ ದ ಟೆರಿಬಲ್–ಭಾಗ ೧ ಮತ್ತು ೨', 'ಅರ್ತ್', 'ವುಮನ್ ಆಫ್ ದಿ ಡೂನ್ಸ್', 'ವೆಡಿಂಗ್', 'ದಿ ಅದರ್ ಸೈಡ್' ಮತ್ತು 'ದ ಫ್ಯಾಷನ್ ಆಫ್ ಜೋನ್ ಆಫ್ ಆರ್ಕ್' ಮೊದಲಾದ ಚಿತ್ರಲೇಖನಗಳನ್ನು ಹೆಸರಿಸಬಹುದು. ಅಂದರೆ ಅವರು ಆಯ್ಕೆ ಮಾಡಿಕೊಂಡ ಬಹುತೇಕ ಚಿತ್ರಲೇಖನಗಳು ಸಾಂಸ್ಕೃತಿಕ ಅನ್ವೇಷಣೆಯೇ ಆಗಿದೆ. ಅದರಲ್ಲಿ ಮಹಾಯುದ್ಧಗಳ ನಂತರ ಬಂದ ಚಲನಚಿತ್ರಗಳನ್ನು ಅವಲೋಕಿಸಿವುದು, ಅವರ ಅತ್ಯಾಸಕ್ತಿಯ ವಿಷಯವೇ ಆಗಿದೆ. ಈ ಹಿನ್ನೆಲೆಯಲ್ಲಿ ಸುಬ್ಬಣ್ಣನವರ 'ರಶೋಮೊನ್ ಅವಲೋಕನ'ವನ್ನು ಕೊಂಚ ವಿವರಿಸಿಕೊಳ್ಳಬಹುದು.'ಕುರೊಸವನ 'ರಶೋಮೊನ್' ಸಿನೆಮಾವು ಮೇಲ್ಮೈಯಲ್ಲಿ ಅತ್ಯಾಚಾರ ಮತ್ತು ಕೊಲೆಯನ್ನು ಕುರಿತ ಸರಳ ಕಥೆಯಾಗಿ ಕಾಣುತ್ತದೆ. ಆದರೆ ಅದರೊಳಗೆ ಬಗೆದು ಹೋದರೆ, ಮಹಾಯುದ್ಧಗಳ ಭೀಕರ ಕ್ರೌರ್ಯಗಳನ್ನು, ಹಿಂಸೆಯ ನೆಲೆಗಳನ್ನು ಮತ್ತು ಅಮಾನವೀಯ ಕೃತ್ಯಗಳನ್ನು ತೆರೆದಿಡುತ್ತದೆ. ಮತ್ತು ಇಡೀ

---

* ವೈದೇಹಿಯವರ, 'ಶಕುಂತಲೆಯೊಡನೆ ಕಳೆದ ಅಪರಾಹ್ನ' ಕಥೆಯು, 'ಲೋಕ ಶಾಕುಂತಲ' ನಾಟಕದ ಪ್ರಬಾವದಿಂದ ಹುಟ್ಟಿಕೊಂಡದ್ದು ಎಂಬುದನ್ನು ನೆನೆದರೆ ವಿಸ್ಮಯವಾಗುತ್ತದೆ.

ಮಾನವಲೋಕವೇ ಯುದ್ಧಗಳ ಭೀಕರತೆಯನ್ನು ಸ್ಮರಿಸಿಕೊಂಡು ತಲ್ಲಣಿಸುವ ದೃಶ್ಯಗಳನ್ನು ಹೆಣೆಯಲಾಗಿದೆ. ಅಂದರೆ ಪ್ರತಿಯೊಬ್ಬ ಮಾನವನು ಯುದ್ಧಗಳಲ್ಲಿ ತನ್ನ ಪಾಲುದಾರಿಕೆಯನ್ನು ಶೋಧಿಸಿಕೊಳ್ಳುವಂತೆ ಮಾಡುವ, 'ರಶೋಮೊನ್' ಸಿನೆಮಾವು ಮಹತ್ಕೃತಿಯಾಗಿದೆ ಎಂದು ಸುಬ್ಬಣ್ಣನವರ ಅಭಿಪ್ರಾಯಪಡುತ್ತಾರೆ.

ಸುಬ್ಬಣ್ಣನವರಿಗೆ ಕುರೊಸವನ 'ರಶೋಮೊನ್' ಪ್ರಿಯವಾಗುವುದು, ಆತ ಬಳಸಿರುವ ಸಂಕೀರ್ಣವಾದ 'ತಂತ್ರ'ದ ಬಗ್ಗೆ ಮತ್ತು ಅದಕ್ಕಿಂತಲೂ ಮುಖ್ಯವಾಗಿ ಕುರೊಸವನು ಸಿನೆಮಾ (ಕಥೆ)ದ ಅರ್ಥವನ್ನು ಹೀಗೆ ಎಂದು ಸ್ಪಷ್ಟವಾಗಿ ಹೇಳದೆ ಅನೂಹ್ಯಗೊಳಿಸಿರುವುದ ಬಗೆಗೆ ಅವರಿಗೆ ಆಸಕ್ತಿಯಿದೆ. ಅಂದರೆ ಈ ಸಿನೆಮಾದ ಮೂಲಕ ಪ್ರತಿಯೊಬ್ಬ ಪ್ರೇಕ್ಷಕನು ತನ್ನಂತರಂಗವನ್ನು ಶೋಧಿಸಿಕೊಳ್ಳಬೇಕಾಗುತ್ತದೆ. ತನ್ನ 'ನ್ಯಾಯವಾದಿತನವನ್ನು ಎಚ್ಚರಗೊಳಿಸಿಕೊಂಡು, ತಮ್ಮಲ್ಲೆ ಚಿಂತಿಸುತ್ತ, ಪಾತ್ರಗಳ ಗುಣಾವಗುಣಗಳನ್ನು ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ಹೀಗೆ ಪ್ರತಿಯೊಬ್ಬ ಪ್ರೇಕ್ಷಕನು ತನಗೆ ದಕ್ಕಿದ ಅನುಭವ ಮತ್ತು ಚಿಂತನೆಗಳ ಮೂಲಕ ಅಂತಿಮವಾಗಿ ನ್ಯಾಯಬದ್ಧವಾದ ವಿಮರ್ಶೆಯನ್ನು ಕೈಗೊಳ್ಳಬೇಕಾಗುತ್ತದೆ. ಹೀಗೆ ಪ್ರತಿಯೊಬ್ಬ ಪ್ರೇಕ್ಷಕನ ಸಂವೇದನೆಯನ್ನು ಹಿಗ್ಗಿಸುವ ಕುರೊಸವನ 'ರಶೋಮೊನ್' ಸಿನೆಮಾ ಒಂದು ಮಹತ್‌ಕೃತಿಯಾಗಿ ಸುಬ್ಬಣ್ಣನವರಿಗೆ ಕಂಡಿದೆ.

ಸುಬ್ಬಣ್ಣನವರು ಸಿನೆಮಾವನ್ನು ಅದು ಒಂದು ಕೃತಿ ಎಂಬುದಾಗಿ ಗ್ರಹಿಸಿಕೊಳ್ಳುತ್ತಾರೆ. ಆ ಸಿನೆಮಾ ಎಂಬ ಕೃತಿಯನ್ನು ಪರೀಕ್ಷಿಸಿ, ಮೌಲ್ಯಮಾಪನ ಮಾಡುವವರು ಪ್ರೇಕ್ಷಕರು. ನಿರ್ದೇಶಕ ಒಂದು ಬಗೆಯ ಕ್ರಿಯಾಶೀಲ ವ್ಯಕ್ತಿಯಾದರೆ; ಪ್ರತಿಯೊಬ್ಬ ಪ್ರೇಕ್ಷಕನು ಒಂದೊಂದು ಬಗೆಯ ಮೌಲ್ಯಮಾಪಕನಾಗಿರುತ್ತಾನೆ. ಸಹೃದಯನನ್ನು ಸೃಜನಶೀಲನನ್ನಾಗಿ ನಿರ್ಮಿಸುವ ಕುರೊಸವನ ತಂತ್ರವೇ ಸುಬ್ಬಣ್ಣನವರಿಗೆ ಮೆಚ್ಚುಗೆ ಯಾಗಿರುವಂತಿದೆ. ಶ್ರೇಷ್ಠ, ಕನಿಷ್ಟ ಮತ್ತು ವಿಮರ್ಶಕ ಮುಂತಾದವುಗಳಲ್ಲಿ ಅಷ್ಟಾಗಿ ಆಸಕ್ತಿ ತಾಳದ ಸುಬ್ಬಣ್ಣನವರು 'ಸಹೃದಯ'; ಅಥವಾ 'ಸಾಮಾಜಿಕ'ನಿಗೆ ಅತಿ ಹೆಚ್ಚು ಪ್ರಾಮುಖ್ಯ ನೀಡುತ್ತಾರೆ. 'ಬಿ.ವಿ. ಕಾರಂತ : ಒಂದು ರಂಗ ಪ್ರಯೋಗ' ಎಂಬ ಲೇಖನದಲ್ಲಿ ಸಹೃದಯರಿಗೆ ಸಂಬಂಧಪಟ್ಟಂತೆ ಹೇಳುವ ಈ ಮಾತುಗಳನ್ನು ಗಮನಿಸಬೇಕು :

"ಮಕ್ಕಳನ್ನು ನಟರಾಗಿ ತಯಾರಿಸುವುದಷ್ಟೇ ಮುಖ್ಯವಲ್ಲ, ಅವರನ್ನು ಒಳ್ಳೆಯ ಪ್ರೇಕ್ಷಕರಾಗುವಂತೆ ತಯಾರಿಸುವುದು ಮತ್ತೂ ಮುಖ್ಯ; ಇವರಲ್ಲಿ ಮುಂದೆ ಹೆಚ್ಚು ಜನ ಉತ್ತಮ ಪ್ರೇಕ್ಷಕರಾಗಿಯೇ ಒದಗಬೇಕು."[೧೧]

ಅಂದರೆ ಯಾವುದೇ ಒಂದು ಕಲಾಕೃತಿಯ ಸಾರ್ಥಕತೆ 'ಸಾಮಾಜಿಕ' ಅಥವಾ 'ಸಹೃದಯ'ನ ಮೂಲಕವೆ ನಿರ್ಧಾರಿತವಾಗಬೇಕಾಗುತ್ತದೆ. "ಕುರೊಸವ ಸ್ಥಾಪಿಸುವ ಸತ್ಯಭ್ರಮೆಗಳೆರಡೂ ಅಷ್ಟು ಶಕ್ತಿವಂತವಾಗಿರುವ ಕಾರಣ, ಪ್ರೇಕ್ಷಕನು ಬೇರೆ ದಾರಿ ಕಾಣದೆ ಅಂತಿಮವಾಗಿ ತನ್ನ ಅಂತರಂಗದೊಳಗೇ ಪ್ರವೇಶಿಸಿಕೊಂಡು ಸತ್ಯವನ್ನು ಹುಡುಕಿಕೊಳ್ಳುವಂತಾಗುತ್ತದೆ"[೧೨] ಎಂಬ ಸುಬ್ಬಣ್ಣನವರ ಮಾತುಗಳನ್ನು

---

೧೧ ಅದೇ, ಪು.೫೩೪.

೧೨ ಅದೇ, ಪು.೫೯೫.

ಗಮನಿಸಿದರೆ, ಕುರೊಸವ ಪ್ರತಿಯೊಬ್ಬ ಪ್ರೇಕ್ಷಕನಲ್ಲಿ ಉಂಟು ಮಾಡುವ ಸ್ವಯಂಶೋಧತೆ ನಮಗೆ ಗೊತ್ತಾಗುತ್ತದೆ.

ಸುಬ್ಬಣ್ಣವರ 'ರಶೋಮೊನ್ ಅವಲೋಕನ'ವು ಕುರೊಸವನ ಚಿತ್ರದ ವಿಮರ್ಶೆಯೆನ್ನುವುದಕ್ಕಿಂತ ಹೆಚ್ಚಾಗಿ, ಒಂದು ಸಿನೆಮಾವನ್ನು ಸಮಗ್ರವಾಗಿ ಗ್ರಹಿಸಿಕೊಳ್ಳಲೆತ್ನಿಸಿದ ದೀರ್ಘ ಚಿತ್ರಲೇಖನವೆನ್ನಬಹುದು, ಇದನ್ನು ಸುಬ್ಬಣ್ಣನವರು ಸ್ವತಃ ಹೇಳಿಕೊಳ್ಳುತ್ತಾರೆ. ಸಿನೆಮಾ ಮಾಧ್ಯಮದ ಮೂಲಕ, ಮನುಷ್ಯನ ಬದುಕಿನ ಅಂತರಂಗದ ವಿವಿಧ ಸ್ತರಗಳನ್ನು ಶೋಧಿಸಿಕೊಂಡು, ಬಹಳ ಪರಿಣಾಮಕಾರಿಯಾಗಿ ಮಂಡಿಸಬಹುದು ಎಂಬುದನ್ನು 'ರಶೋಮೊನ್ ಅವಲೋಕನ'ದ ಮೂಲಕ ತಿಳಿದುಕೊಳ್ಳಬಹುದು. ಇದರ ಜತೆಗೆ, ಚಿತ್ರವನ್ನು ಗ್ರಹಿಸುವ ವಿನ್ಯಾಸಕ್ರಮ, ಚಿತ್ರ ನಿರ್ಮಾಣದ ಸಾಮಗ್ರಿ, ದೃಶ್ಯ ಸಂಯೋಜನೆ, ಕೆಮೆರಾ ಚಲನೆ, ಸಂಕಲನ ಮತ್ತು ತಂತ್ರ ಮುಂತಾದವುಗಳು ಹೊರಡಿಸುವ ವಿವಿಧ ಬಗೆಗಳನ್ನು ಕುರಿತು ಸುಬ್ಬಣ್ಣನವರು ಮಾತನಾಡುತ್ತಾರೆ. ಒಟ್ಟಾರೆ 'ರಶೋಮೊನ್ ಅವಲೋಕನ'ವನ್ನು 'ಸಿನೆಮಾ ಕೈಪಿಡಿ'ಯೆಂತಲೂ ಹೇಳಬಹುದು.

'ನನ್ನ ಪ್ರೀತಿಯ ಹಿರೋಶಿಮಾ' ಚಿತ್ರಲೇಖನವು ಬಹಳ ಪ್ರಮುಖವಾದುದು. ಅಲೆನ್ ರೆನ್ನೈ ನಿರ್ದೇಶಿಸಿದ 'ಹಿರೋಶಿಮಾ ಮೊನ್ ಅಮೊರ್' ಚಿತ್ರದ ವಿಶ್ಲೇಷಣೆ ಕುರಿತು ಸುಬ್ಬಣ್ಣನವರ ಈ ಲೇಖನವು ಸಿನೆಮಾದ ಸಮರ್ಥ ಮಾಧ್ಯಮವನ್ನು ಚಿತ್ರಿಸುತ್ತದೆ.

'ಹಿರೊಶಿಮಾ ಮೊನ್ ಅಮೊರ್' ಚಿತ್ರವು ಹಿರೊಶಿಮಾ ಮತ್ತು ನಾಗಸಾಕಿಯ ದುರಂತವನ್ನು ಕುರಿತ ಕಥಾವಸ್ತುವನ್ನು ಒಳಗೊಂಡಿದೆ. ಯುದ್ಧದಿಂದ ನಾಗರೀಕ ಬದುಕು ಯಾವ ರೀತಿಯ ಕ್ರೌರ್ಯತೆಯಿಂದ ತುಂಬಿದೆ ಎಂಬುದನ್ನು ಚಿತ್ರಿಸುತ್ತದೆ. ಮನುಷ್ಯ ಸಂಬಂಧಗಳನ್ನು ಚಿತ್ರಿಸುವಲ್ಲಿಯೂ ಇದೊಂದು ಅತ್ಯುತ್ತಮ ಚಿತ್ರವಾಗುತ್ತದೆ. "ಹಿರೊಶಿಮಾ ಮೊನ್ ಅಮೊರ್'ನಂಥ ಮಹತ್ಕೃತಿ, ಚಲನಚಿತ್ರ ಮಾಧ್ಯಮದಲ್ಲಿ ಮಾತ್ರವಲ್ಲ, ಸಾಹಿತ್ಯವೂ ಕೂಡಿ ಮತ್ತಾವುದೇ ಮಾಧ್ಯಮದಲ್ಲಿ ಕೂಡ ಈ ತನಕವೂ ಪ್ರಾಯಶಃ ಬಂದಿಲ್ಲ ಎನ್ನಿಸುತ್ತದೆ"[೧೩] ಎಂದು ಸುಬ್ಬಣ್ಣನವರು 'ಹಿರೊಶಿಮಾ ಮೊನ್ ಅಮೊರ್' ಚಿತ್ರದ ಬಗ್ಗೆ ಪ್ರಶಂಸೆ ವ್ಯಕ್ತಪಡಿಸುತ್ತಾರೆ. ಒಟ್ಟು ಮಾನವ ಪ್ರಪಂಚದ ಕತೆಯನ್ನು ಚಿತ್ರಿಸುವ ಈ ಚಿತ್ರವು ಯುದ್ಧದಂತಹ ಭಯಾನಕ ದೃಶ್ಯಗಳನ್ನು ತೆರೆದಿಡುತ್ತದೆ.

ಭಾರತಕ್ಕೆ ಸಂಬಂಧಿಸಿದಂತೆ ಸತ್ಯಜಿತ್‌ರಾಯ್‌ರವರ 'ಪಥೇರ್ ಪಾಂಚಾಲಿ' ಚಿತ್ರವನ್ನು ಇಲ್ಲಿ ಪ್ರಸ್ತಾಪಿಸುವುದು ಸೂಕ್ತವೆನಿಸುತ್ತದೆ. 'ರಶೋಮೊನ್' ಚಿತ್ರ, ಜಪಾನ್‌ನ ಚಲನಚಿತ್ರದ ಕಡೆಗೆ ಮೊತ್ತ ಮೊದಲಿಗೆ ಪ್ರಪಂಚದ ಗಮನ ಸೆಳೆದ ಹಾಗೆ. 'ಪಥೇರ್ ಪಂಚಾಲಿ'ಯು ಭಾರತದ ಚಲನಚಿತ್ರದ ಕಡೆಗೆ ವಿಶ್ವವು ನೋಡುವಂತೆ ಗಮನ ಸೆಳೆಯಿತು. ಬಂಗಾಳದ ನವೋದಯ ಸಾಹಿತ್ಯದ ಕಾಲದಲ್ಲಿ ಕೃತಿಗಳನ್ನು ರಚಿಸುತ್ತಿದ್ದ ವಿಭೂತಿಭೂಷಣ ಬ್ಯಾನರ್ಜಿಯವರ ಪ್ರಸಿದ್ಧ ಕಾದಂಬರಿ 'ಪಥೇರ್ ಪಾಂಚಾಲಿ'ಯನ್ನು ಸತ್ಯಜಿತ್‌ರಾಯ್‌ರವರು ೧೯೫೫ರಲ್ಲಿ ಸಿನೆಮಾ ಮಾಡಿದರು.

---

೧೩ ಆದೇ, ಪು.೬೫೧.

'ಪಥೇರ್ ಪಾಂಚಾಲಿ' ಚಿತ್ರದಲ್ಲಿ ವ್ಯಕ್ತವಾಗುವ ಮಾನವೀಯತೆ, ಪ್ರಬುದ್ಧತೆ ಮತ್ತು ಚಿತ್ರದ ಪ್ರಸ್ತುತತೆ ಸುಬ್ಬಣ್ಣನವರಿಗೆ ಮೆಚ್ಚುಗೆಯಾಗುತ್ತದೆ. ಇದೆಲ್ಲದರ ಜೊತೆಗೆ, ಸತ್ಯಜಿತ್‌ರಾಯ್‌ರವರು - ವಸ್ತುಚಲನೆ, ಕೆಮೆರಾಚಲನೆ ಹಾಗೂ ದೃಶ್ಯಗಳ ವಿನ್ಯಾಸಕ್ರಮಗಳು ಮತ್ತು ಸಂಕಲನ ಮುಂತಾದವುಗಳನ್ನು ಬಳಸಿಕೊಂಡು ರಾಯ್‌ರವರು ಸಾಧಿಸಿರುವ ಸಿನೆಮಾ ಭಾಷೆಯ ಮೇಲಿನ ಹತೋಟಿ, ಸುಬ್ಬಣ್ಣನವರಿಗೆ ಮುಖ್ಯವಾಗುತ್ತವೆ. ಬದುಕಿನ ಜೀವಂತ ಕೃತಿಯಾಗಿ ಅವರು ಕಂಡುಕೊಳ್ಳುತ್ತಾರೆ.

ಒಟ್ಟಂದದಲ್ಲಿ ಹೇಳುವುದಾದರೆ, ಸುಬ್ಬಣ್ಣನವರು ಸಿನೆಮಾವನ್ನು ಒಂದು ಗಂಭೀರ ಮಾಧ್ಯವನ್ನಾಗಿ ಸ್ವೀಕರಿಸಿದರೂ, ನಾಟಕಕ್ಕೆ ಕೊಡುವ ಮಹತ್ವವನ್ನು ಸಿನೆಮಾಕ್ಕೆ ಕೊಡುವುದಿಲ್ಲ, ಹಾಗಾಗಿಯೇ ಅವರು ಸಿನೆಮಾದ ನಟವರ್ಗವನ್ನು 'ತಾರಾವರ್ಗ'ವೆಂದೂ, ನಾಟಕದಲ್ಲಿ ಅಭಿನಯಿಸುವ ನಟರನ್ನು 'ನಟವರ್ಗ'ವೆಂದು ಕಾಣಿಸುತ್ತಾರೆ.

**ಬ) ಸಮುದಾಯಪ್ರಜ್ಞೆ ಮತ್ತು ಸುಬ್ಬಣ್ಣನವರ ಚಿಂತನೆಗಳು :**

ಸುಬ್ಬಣ್ಣನವರು ಒಂದೆಡೆ ಹೀಗೆ ಹೇಳಿಕೊಳ್ಳುತ್ತಾರೆ:

"ಜನಸಮುದಾಯದ ಒಳಗೆ ಉತ್ಕಟವಾಗಿ, ಪ್ರಾಮಾಣಿಕವಾಗಿ ಬದುಕುವುದಿದೆಯಲ್ಲ, ಅದೇ ನನಗೆ ಜೀವಪ್ರೀತಿಯನ್ನು ಉಕ್ಕಿಸುತ್ತದೆ, ಈ ರೀತಿ ಬದುಕಿದಾಗ ಮಾತ್ರ ಬೇರೆಯವರ ಬದುಕನ್ನು ತಿದ್ದಲು ಬದಲಾಯಿಸಲು ಸಾಧ್ಯ."

ಮೇಲಿನ ಮಾತುಗಳಲ್ಲಿ ವೈಯಕ್ತಿಕವಾಗಿ ತಾನು ಬೆಳೆದು ಆ ಮೂಲಕ ತನ್ನ ಸಮುದಾಯವನ್ನು ಬೆಳೆಸಬೇಕೆಂಬ ತುಡಿತ, ಹಂಬಲವಿದೆ. ಸಮಸ್ತ ದಿಕ್ಕುಗಳಲ್ಲೂ ತನ್ನ ಸ್ವ-ನೆಲೆಯಿಂದಲೇ ಪ್ರಗತಿಹೊಂದಬೇಕೆಂಬ ಅಚಲವಾದ ಮನಸ್ಸಿದೆ. ಈ ಬಗೆಯ ನಿಚ್ಚಳವಾದ ಮನೋಧೋರಣೆಗಳನ್ನು ಹೊಂದಿಯೇ ಸುಬ್ಬಣ್ಣನವರು ತಾನು ಬೆಳೆದದ್ದು ಮತ್ತು ಸಮುದಾಯವನ್ನು ಬೆಳೆಸಲು ಶ್ರಮಿಸಿದ್ದು. ಸಮುದಾಯದೊಂದಿಗೆ ಸುಬ್ಬಣ್ಣನವರು ಬೆಳೆದಿದ್ದಾರೆ; ಸುಬ್ಬಣ್ಣನವರೊಂದಿಗೆ ಸಮುದಾಯವು ಬೆಳೆದಿದೆ. ಒಟ್ಟಾರೆ ಸುಬ್ಬಣ್ಣನವರೆಂದರೆ ಅದೊಂದು ಊರು, ಸಮುದಾಯ ಎನ್ನಬಹುದು.

ಗಾಂಧೀಜಿಯವರ 'ಹಳ್ಳಿಗಳಿಗೆ ಹಿಂತಿರುಗಿ' ಎಂಬ ಕರೆ (ಕಾರ್ಯಕ್ರಮ)ಯು ಸುಬ್ಬಣ್ಣನವರ ಮೇಲೆ ಬಹಳ ಪ್ರಭಾವ ಬೀರಿತು. ಗಾಂಧೀಜಿಯವರು ಈ ಕಾರ್ಯಕ್ರಮವನ್ನು ಸ್ವಾತಂತ್ರ್ಯ ಹೋರಾಟದ ಒಂದು ಭಾಗವಾಗಿ ಕಂಡುಕೊಂಡರು. ಸುಬ್ಬಣ್ಣನವರು ಹೆಗ್ಗೋಡು ಎಂಬ ಸಮುದಾಯದಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡು, ಸಮುದಾಯಗಳ ಪುನರುಜ್ಜೀವನ ಮತ್ತು ಅದರ ಸೇವೆಗೆ ತಮ್ಮನ್ನು ನಿರಂತರವಾಗಿ ಅರ್ಪಿಸಿಕೊಂಡರು. 'ಮಾದರಿ ಸಾಂಸ್ಕೃತಿಕ ಕೇಂದ್ರ'ವನ್ನಾಗಿ ರೂಪಿಸಿದರು. ಅವರ ಎಲ್ಲ ಸೃಜನಶೀಲ ಚಟುವಟಿಕೆಗಳಾದ ನೀನಾಸಂನ ಸ್ಥಾಪನೆ ಮತ್ತು ಅದರ ವಿಸ್ತರಣೆಯ ಭಾಗವಾಗಿ ರೂಪುಗೊಂಡ 'ತಿರುಗಾಟ', 'ಅಕ್ಷರ ಪ್ರಕಾಶನ', 'ಚಲನಚಿತ್ರ ರಸಗ್ರಹಣ ಶಿಬಿರಗಳು' ಹಾಗೂ ಪ್ರತಿವರ್ಷ ಜರುಗುವ ಸಾಂಸ್ಕೃತಿಕ ಶಿಬಿರಗಳು ಮತ್ತು ಸಂಘಟನೆ, 'ರಂಗಭೂಮಿ' ಹಾಗೂ ಪ್ರಾರಂಭದಲ್ಲಿ ಹೊರತರುತ್ತಿದ್ದ 'ಅಶೋಕ' ಎಂಬ ವಾರಪತ್ರಿಕೆ ಮುಂತಾದವುಗಳನ್ನು ಸಮುದಾಯದ ಭಾಗಗಳಾಗಿಯೇ ಕಾಣಬೇಕಾಗುತ್ತದೆ. ಸಮುದಾಯವನ್ನು

ಹೊರತುಪಡಿಸಿದರೆ ಸುಬ್ಬಣ್ಣನವರ ಅಸ್ತಿತ್ವವೇ ಇರಲಾರದು. ಅಷ್ಟರಮಟ್ಟಿಗೆ ಅವರು ಬೆರೆತು ಹೋಗಿದ್ದಾರೆ ಎಂಬುದನ್ನು ನೆನಪಿನಲಿಟ್ಟುಕೊಳ್ಳಬೇಕು.

ಸುಮಾರು ೭೩ ವರ್ಷಗಳ ಸುದೀರ್ಘ ಕಾಲವನ್ನು 'ಹೆಗ್ಗೋಡಿ'ನಲ್ಲಿಯೇ ಕಳೆದ ಸುಬ್ಬಣ್ಣನವರು ಗಾಂಧೀಜಿಯುವರ ತಾತ್ತ್ವಿಕ ಚಿಂತನೆಗಳನ್ನು ತಮ್ಮ ವ್ಯಕ್ತಿತ್ವದ ಅವಿಭಾಜ್ಯ ಅಂಗಗಳನ್ನಾಗಿ ರೂಪಿಸಿಕೊಂಡು ಅವಿಶ್ರಾಂತವಾಗಿ, ರಚನಾತ್ಮಕತೆಯಿಂದ ಅವುಗಳನ್ನೆಲ್ಲಾ ಸಾಧಿಸಲು ಯತ್ನಿಸಿದರು. ಇಲ್ಲೊಂದು ಸ್ಪಷ್ಟತೆಯನ್ನು ಕಂಡುಕೊಳ್ಳಬೇಕು. 'ಹೆಗ್ಗೋಡ'ನ್ನು ಮಾತ್ರವೇ ಸಮುದಾಯವೆಂದು ತಿಳಿದರೆ, ಸುಬ್ಬಣ್ಣ ಮತ್ತು ಸಮುದಾಯ ಎರಡನ್ನು ಪರಿಪೂರ್ಣವಾಗಿ ಗ್ರಹಿಸಿದಂತಾಗುವುದಿಲ್ಲ. ಸುಬ್ಬಣ್ಣನವರು 'ನನ್ನ ಅನುಭವಕ್ಕೆ ದಕ್ಕಿದ ರಂಗಕಲ್ಪನೆ' ಎಂಬ ಲೇಖನದಲ್ಲಿ ಹೇಳುವ ಮಾತುಗಳನ್ನು ಬಹಳ ಎಚ್ಚರದಿಂದ ಗಮನಿಸಬೇಕು:

'ಹೆಗ್ಗೋಡಿನ ಸುತ್ತ, ಇದರಷ್ಟೇ ಅಥವಾ ಇದಕ್ಕಿಂತ ಚಿಕ್ಕದಾದ ಹಲವಾರು ಹಳ್ಳಿಗಳಿವೆ. ನಲವತ್ತೈದು ವರ್ಷ ಹಿಂದೆ ಇಲ್ಲಿನ ಜನಸಂಖ್ಯೆ ಇನ್ನೂ ರೆಕ್ಕೆ ಮಿಕ್ಕಿರಲಿಲ್ಲ. ಈ ಸುಮಾರು ಐನೂರು ಈಗಿನ ಲೆಕ್ಕದಲ್ಲಿ, ಸುಮಾರು ಐದು ಮೈಲಿ ಸುತ್ತಳತೆಯ ಹಳ್ಳಿಗಳ ಒಟ್ಟು ಜನಸಂಖ್ಯೆ ಆರೆಂಟು ಸಾವಿರವಾದೀತು; ಹತ್ತು ಮೈಲಿ ಸುತ್ತಳತೆಯಲ್ಲಾದರೆ ಹದಿನೈಪ್ಪತ್ತು ಸಾವಿರವಾದಿತು. ನೀನಾಸಮ್ ಎಂಬ ನಮ್ಮ ಸಂಸ್ಥೆಯನ್ನು ರೂಪಿಸಿದ ಜನಪದ ಇದೇ."[೧೪]

ಸಮುದಾಯವನ್ನು ಹೆಗ್ಗೋಡಿಗಷ್ಟೇ ವಿಸ್ತರಿಸಿಕೊಳ್ಳದೆ, ಅಲ್ಲಿನ ಸುತ್ತ-ಮುತ್ತಲಿನ ಹಳ್ಳಿಗಳನ್ನು ಒಳಗೊಂಡಿದೆ. ಅದನ್ನು ವ್ಯಾಪಕವಾದ, ವಿಸ್ತಾರವಾದ ಸ್ವರೂಪದಲ್ಲಿ ಗ್ರಹಿಸಿಕೊಳ್ಳಬೇಕಾಗುತ್ತದೆ. ಸಮುದಾಯದ ಒತ್ತಾಸೆ, ತುರ್ತಿನಿಂದ ಹುಟ್ಟಿಕೊಂಡ ನೀನಾಸಂ, 'ತಿರುಗಾಟ'ದ ಮೂಲಕ ಇಡೀ ದೇಶದ ಅನೇಕಾನೇಕ ಕಿರು-ಕಿರು ಸಮುದಾಯಗಳನ್ನು ಒಳಗೊಳ್ಳುವ, ಸಂಧಿಸುವ ಪ್ರಕ್ರಿಯೆಯುಳ್ಳದ್ದು. ನೀನಾಸಂನ ನೇಪಥ್ಯದಲ್ಲಿರುವ ಸಮುದಾಯವು ಇಡೀ ರಾಷ್ಟ್ರ ಮತ್ತು ಅಂತರಾಷ್ಟ್ರೀಯಕ್ಕೆ ಒಂದು ಮಾದರಿಯಾಗಿ ರೂಪುಗೊಂಡಿದ್ದನ್ನು ಈ ನೆಲೆಯಲ್ಲಿಯೇ ಗ್ರಹಿಸಿಕೊಳ್ಳಬೇಕಾಗುತ್ತದೆ.

ಸುಬ್ಬಣ್ಣನವರು ಹೆಗ್ಗೋಡಿನಂತಹ ಪರಿಸರದಲ್ಲಿ ಬದುಕುತ್ತ ಜೀವನಕ್ಕಾಗಿ ಕೃಷಿಯನ್ನು ತನ್ನ ಕಾಯಕ ವೃತ್ತಿಯನ್ನಾಗಿ ಸ್ವೀಕರಿಸಿದ ಪರಿಯೂ ಸಮುದಾಯದ ಬದುಕನ್ನೇ ಅವಲಂಬಿಸಿದೆ. ಸಾಮಾಜಿಕ, ರಾಜಕೀಯ, ನಾಟಕ, ರಂಗಭೂಮಿ, ಸಿನೆಮಾ ಮತ್ತು ಸಾಹಿತ್ಯ-ಹೀಗೆ ವಿಸ್ತಾರವಾದ ಅವರ ಆಸಕ್ತಿ ಕ್ಷೇತ್ರಗಳನ್ನು ಸಮುದಾಯದ ಹಿನ್ನೆಲೆಯಲ್ಲಿಯೆ ಗ್ರಹಿಸಿಕೊಳ್ಳಬೇಕಾಗುತ್ತದೆ. ಸುಬ್ಬಣ್ಣನವರು ಬಯಸುವ ವಿಕೇಂದ್ರೀಕರಣವೂ ಸಹ ಸಮುದಾಯದ ಅಪೇಕ್ಷೆಯೇ ಆಗಿದೆ. ಇಂತಹ ಅಪೇಕ್ಷೆಗೆ ಕೇವಲ ಆರ್ಥಿಕ ಮತ್ತು ರಾಜಕೀಯ ತುರ್ತುಗಳೂ ಮಾತ್ರ ಕಾರಣವಲ್ಲ; ಸಾಂಸ್ಕೃತಿಕ ವಿಕೇಂದ್ರೀಕರಣವೂ ಅತಿ ಮುಖ್ಯ ಕಾರಣವಾಗುತ್ತದೆ. 'ವಿಕೇಂದ್ರೀಕರಣದ ಪರಿ' ಎಂಬ ಲೇಖನದಲ್ಲಿ ಕೀರ್ತಿಜೈನ್‌ರವರೊಂದಿಗೆ ಅತ್ಯಂತ ಸಂಯಮ, ವಿನಯದಿಂದ ತಮ್ಮ ಅಭಿಪ್ರಾಯಗಳನ್ನು ಹೇಳಿಕೊಳ್ಳುತ್ತಾರೆ. ಸಾಂಸ್ಕೃತಿಕ ಅಂಗಸಂಸ್ಥೆಗಳಾದ -ರಾಷ್ಟ್ರೀಯ ನಾಟಕ ಶಾಲೆ' ಮತ್ತು 'ಕನ್ನಡ ಸಾಹಿತ್ಯ ಪರಿಷತ್ತು' - ಇವುಗಳ ಬಗ್ಗೆ ಸುಬ್ಬಣ್ಣನವರು ಕಾಣುವ ರೀತಿಯನ್ನು ಎಚ್ಚರದಿಂದ ಗಮನಿಸಬೇಕು.

---

[೧೪] ಅದೇ, ಪು.೬೫೨.

'ರಾಷ್ಟ್ರೀಯ ನಾಟಕ ಶಾಲೆ'ಯ ವಿಕೇಂದ್ರೀಕರಣದ ಕುರಿತು ಮಾತನಾಡುತ್ತಾ, ರಂಗಭೂಮಿಯನ್ನು ಬೆಳೆಸುವ ಬಗೆಗೆ ಸುಬ್ಬಣ್ಣನವರು ನೀಡುವ ಸಲಹೆಗಳು ಪ್ರಜಾಪ್ರಭುತ್ವದ ತಾತ್ತ್ವಿಕತೆಯನ್ನು ಪ್ರತಿಪಾದಿಸುತ್ತವೆ. ಕಲೆಯನ್ನು ಬದುಕಿನ, ಸಮುದಾಯದ ಭಾಗವಾಗಿ ಸ್ವೀಕರಿಸುವ ಅಥವಾ ಒಡ್ಡಿಕೊಳ್ಳುವ ಅವರ ಮನಸ್ಥಿತಿಯನ್ನು ಕಾಣಬಹುದಾಗಿದೆ.

ಇದೇ ಸಂದರ್ಭದಲ್ಲಿ ರಂಗಭೂಮಿಯ ಪ್ರಕಾರವಾದ 'ಯಕ್ಷಗಾನ'ಕ್ಕೆ ಸಂಬಂಧಿಸಿದಂತೆ ಒಂದು ಮುಖ್ಯ ಮಾತನ್ನು ಹೇಳಬೇಕು. 'ಯಕ್ಷಗಾನ'ವು ಸಮುದಾಯದ ಅವಿಭಾಜ್ಯ ಅಂಗವೆಂದೇ ಭಾವಿಸಿಕೊಂಡಿದ್ದ ಸುಬ್ಬಣ್ಣನವರು, ಯಕ್ಷಗಾನ-ಸಮುದಾಯ ಎರಡರ ನಡುವಿನ ಸಂಬಂಧಗಳನ್ನು ಸಾಂಸ್ಕೃತಿಕ ಕಥನಗಳ ಮೂಲಕ ಅರ್ಥೈಸುವ ರೀತಿಯನ್ನು ಕಾಣಬಹುದು. ಸಮುದಾಯದ ಅಭಿವ್ಯಕ್ತಿ ಕಥನಗಳಾದ -ಸಂಗ್ಯಾಬಾಳ್ಯ' ಮತ್ತು 'ಕಡ್ಲಿಮಟ್ಟಿ ಸ್ಟೇಶನ್ ಮಾಸ್ಟರ್'ಗಳು ಆಧುನಿಕ ನಾಗರೀಕತೆಗೆ ನೀಡಿದ ಪ್ರತಿಕೆಯನ್ನು ಕುರಿತು ಸಮಾಲೋಚಿಸುತ್ತಾರೆ. ಇದನ್ನೆಲ್ಲಾ ಇಲ್ಲಿ ಯಾಕೆ ಪ್ರಸ್ತಾಪಿಸುತ್ತಿದ್ದೇನೆಂದರೆ ಸಮುದಾಯದ ಸಮಸ್ತ ಜೀವನವು ಸುಬ್ಬಣ್ಣನವರನ್ನು ತಾಕಿದೆ ಮತ್ತು ಪ್ರಭಾವಗೊಳಿಸಿದೆ. ಸಮುದಾಯದ ಅನೇಕ ವೈವಿಧ್ಯತೆಗಳು ಅವರ ವಿವೇಕವನ್ನು ಪ್ರಖರಗೊಳಿಸಿವೆ.

ಸುಬ್ಬಣ್ಣನವರಿಗೆ ಅಂಬಿಗರು, ಮೀನುಗಾರರು ಮತ್ತು ನೀನಾಸಂ ಸಂಸ್ಥೆಯಿಂದ ಮುನ್ನೆಲೆಗೆ ಬಂದ 'ಸಿದ್ಧಿ' ಎಂಬ ಬುಡಕಟ್ಟು ಜನಾಂಗದವರು ತಮ್ಮದೇ ಆದ ಶೈಲಿಗಳನ್ನು ರೂಢಿಸಿಕೊಂಡು ಯಕ್ಷಗಾನವನ್ನು ಬೆಳೆಸುತ್ತಿರುವುದರ ಬಗ್ಗೆ ಹೆಮ್ಮೆಯಿದೆ, ಪ್ರೀತಿಯಿದೆ. ನಾನಿಲ್ಲಿ ಏನನ್ನು ಹೇಳಲು ಪ್ರಯತ್ನಿಸುತ್ತಿದ್ದೇನೆಂದರೆ ಅನೇಕಾನೇಕ ಕಿರು-ಕಿರು ಸಮುದಾಯಗಳು ಸುಬ್ಬಣ್ಣನವರ ತಾತ್ವಿಕ ಚಿಂತನೆಗಳನ್ನು ರೂಪಿಸಿವೆ ಮತ್ತು ಮೊದಲೇ ಹೇಳಿದಂತೆ ಇಂತಹ ತಾತ್ತ್ವಿಕ ಚಿಂತನೆಗಳ ಫಲವಾಗಿಯೇ, 'ನೀನಾಸಂ', 'ಅಕ್ಷರ ಪ್ರಕಾಶನ', 'ರಂಗ ಶಿಕ್ಷಣ ಕೇಂದ್ರ', 'ಚಲನಚಿತ್ರೋತ್ಸವ' ಮುಂತಾದವುಗಳಾಗಿವೆ ಎನ್ನಬಹುದು. ಅಂದರೆ ಇವೆಲ್ಲವೂ ಸಮುದಾಯದ ಮಾದರಿಗಳಾಗಿಯೇ ಜನ್ಮತಾಳಿವೆ ಎನ್ನುವುದನ್ನು ಗಮನದಲ್ಲಿಡಬೇಕು.

ಪ್ರಜಾಪ್ರಭುತ್ವದ ಬಗ್ಗೆ ಅಪಾರ ವಿಶ್ವಾಸವನ್ನೊಂದಿದ್ದ ಸುಬ್ಬಣ್ಣನವರು 'ಸ್ವಾತಂತ್ರ್ಯ'ದ ಜೊತೆಗೆ 'ಸಮಾನತೆ' ಎಂಬ ಸಮಾಜವಾದಿ ಮೌಲ್ಯವನ್ನು ಸೇರಿಸಿಕೊಂಡು ಅವೆರಡನ್ನೂ ಅವಳಿ-ಜವಳಿಗಳೆಂದು ಭಾವಿಸಿಕೊಂಡಿದ್ದರು. ಸಹಬಾಳ್ವೆ ಹೊಂದಾಣಿಕೆ, ಸಾಮರಸ್ಯ ಮತ್ತು ವಿಕೇಂದ್ರೀಕರಣ- ಇವೆಲ್ಲವುಗಳು ಪ್ರಜಾಪ್ರಭುತ್ವದ ಭದ್ರಬುನಾದಿಗಳಾಗಿದ್ದು, ಯಶಸ್ಸುಗಳು ಇವುಗಳ ಮೇಲೆ ನಿಂತಿದೆ ಎಂದು ಹೇಳುತ್ತಿದ್ದರು. ನಾನು ಎನ್ನುವುದಕ್ಕಿಂತ 'ನಾವು' ಎಂಬುದಕ್ಕೆ ಮತ್ತು ಅನ್ಯ ಎನ್ನುವುದಕ್ಕಿಂತ 'ಸಹ' ಎಂಬುದಕ್ಕೆ ಬದ್ಧರಾಗಿದ್ದ ಅವರು ಸಮುದಾಯದ ಅಸ್ತಿವಾರವಾಗಿ ನಿರ್ಮಿಸಿಕೊಂಡಿದ್ದರು. ಇಂತಹ ತಾತ್ವಿಕ ನಿಲುವುಗಳು ಸ್ಥಳೀಯ ಪ್ರಜ್ಞೆಯಿಂದ, ವಿಶ್ವಪ್ರಜ್ಞೆಯವರೆಗೆ ವ್ಯಾಪಿಸುವ ವಿಶಾಲವಾದ ಮನೋಭಾವವನ್ನು ನಿರ್ಮಿಸಿತು. 'ನಮ್ಮ ಚಳುವಳಿಗಳು ಮತ್ತು ಪ್ರಜಾಪ್ರಭುತ್ವ'ದಲ್ಲಿ ಸುಬ್ಬಣ್ಣನವರು ಹೇಳುವ ಈ ಮಾತುಗಳನ್ನು ಕೇಳಿದರೆ, ನನ್ನ ಮಾತುಗಳು ಸ್ಪಷ್ಟವಾಗುತ್ತವೆ:

". . . ಕುಟುಂಬ ಸಮುದಾಯ, ಗ್ರಾಮಸಮುದಾಯ ಮುಂತಾದ ನಮ್ಮ ಅತಿಸಮೀಪದ ಕಿರು ಸಮುದಾಯಗಳಲ್ಲಿ ನಾವು ಒಬ್ಬೊರಿಗೊಬ್ಬರು ನೆರವಾಗುತ್ತ, ಒಬ್ಬರಿಂದೊಬ್ಬರು ಕಲಿತುಕೊಳ್ಳುತ್ತ ಸ್ವಯಂನಿಯಂತ್ರಣ ಮತ್ತು ಸಮುದಾಯ ಸಹೃದಯತೆಗಳನ್ನು ಸಾಧಿಸಿಕೊಳ್ಳುತ್ತೇವೆ. ಹೀಗೆ, ಕಿರು

ಸಮುದಾಯಗಳ ತನಕ ಸ್ವಯಂ ನಿಯಂತ್ರಣ ಸಹಯೋಗಗಳನ್ನು ವಿಸ್ತರಿಸಿ ಸಾಧಿಸಿಕೊಳ್ಳುವ ಪ್ರಕ್ರಿಯೆಯು ಪ್ರಜಾಪ್ರಭುತ್ವದ ಅಸ್ತಿವಾರವಾಗುತ್ತದೆ."[೧೫]

ವಿಮರ್ಶಕರಾದ ಟಿ.ಪಿ. ಅಶೋಕರರು ಹೇಳುವಂತೆ, ಪ್ರಜಾಪ್ರಭುತ್ವವನ್ನು ಕೇವಲ ಒಂದು ರಾಜಕೀಯ ಆಡಳಿತ ವ್ಯವಸ್ಥೆಯಾಗಿ ಕಾಣದೆ, ಅದನ್ನೊಂದು ಜೀವನಕ್ರಮವನ್ನಾಗಿ ಮಾಡಿಕೊಂಡು ಯಶಸ್ವೀ ಪ್ರಜಾಪ್ರಭುತ್ವವನ್ನು ರೂಪಿಸಿಕೊಳ್ಳುವುದರ ಬಗ್ಗೆ ಚಿಂತಿಸುತ್ತಾರೆ. ಪ್ರಜಾಪ್ರಭುತ್ವದ ವ್ಯವಸ್ಥೆಯೊಳಗೆ ಅನೇಕಾನೇಕ ಸಮುದಾಯಗಳ ಪಾತ್ರವನ್ನು ಮತ್ತು ಅವುಗಳ ಮಹತ್ವವನ್ನು ವಿವರಿಸುತ್ತಾರೆ ಮತ್ತು ಸಮುದಾಯಗಳು ಮೂಡಿಸಿಕೊಳ್ಳಬೇಕಾದ ಅರಿವು-ಎಚ್ಚರ ಹಾಗೂ ಅವುಗಳ ಅಜಾಗರೂಕತೆಯಿಂದ ಸ್ಥಾಪಿತವಾಗುವ 'ಸರ್ವಾಧಿಕಾರ' ಇವುಗಳ ಕುರಿತು ವಿವರವಾಗಿ ಪರಿಶೀಲಿಸುತ್ತಾರೆ. ಅಂದರೆ ಸುಬ್ಬಣ್ಣನವರ ಸಮುದಾಯ ಪ್ರಜ್ಞೆ ಭಾವುಕವಾಗಿ ಅಪ್ಪಿಕೊಳ್ಳುವಂಥದ್ದಲ್ಲ; ಅಲ್ಲಿನ ನಡಾವಳಿಗಳಲ್ಲಿ ಕಾಣುವ ಮಿತಿಗಳನ್ನು ನಮಗೆ ಕಾಣಿಸುವಂತದ್ದಾಗಿದೆ.

ಕೊನೆಯಲ್ಲಿ, ಸುಬ್ಬಣ್ಣನವರ ಮುನ್ನೋಟದ ಕುರಿತು ಒಂದೆರಡು ಮಾತು ಹೇಳಬೇಕು. ತನ್ನ ಶಾಶ್ವತ ಗೈರುಹಾಜರಿಯಲ್ಲಿ ಸಮುದಾಯದ ಸೇವೆಗಾಗಿ ತನ್ನ ಮಗನಾದ ಕೆ.ವಿ. ಅಕ್ಷರ ಮತ್ತು ಮೊಮ್ಮಗನಾದ ಶಿಶಿರರನ್ನು ತಯಾರುಗೊಳಿಸಿದ್ದ ಸುಬ್ಬಣ್ಣನವರು, ಸಮುದಾಯದೊಂದಿಗೆ ಇರಿಸಿಕೊಂಡಿದ್ದ ದಟ್ಟವಾದ ನಂಟನ್ನು ನಮಗೆ ಮನಗಾಣಿಸಿಕೊಡುತ್ತದೆ. ಇಂತಹ ದೂರದರ್ಶಿತ್ವವನ್ನು 'ಗೋಕುಲ ನಿರ್ಗಮನ'ದಲ್ಲಿ ಅವರಾಡುವ ಮಾತುಗಳ ಮೂಲಕ ಸೂಕ್ಷ್ಮವಾಗಿ ಗಮನಿಸಬಹುದು:

". . .ಊರಲ್ಲಿರುವ ಬುದ್ಧಿವಂತ ಚುರುಕು ಮಕ್ಕಳು, ಕಸುಬು ಕಲಿತ ಕಲಿಯಬೇಕಾದ ಮಕ್ಕಳು ಊರು ಬಿಟ್ಟು ದೂರ ಹೋಗುತ್ತಾರೆ. ಸಮುದಾಯ ದುರ್ಬಲವಾಗುತ್ತದೆ, ದರಿದ್ರವಾಗುತ್ತದೆ. ಒಂದು ಕಡೆಯಿಂದ ನಮ್ಮ ಹೊಳೆಗುಡ್ಡ, ಮರಮಣ್ಣು, ನೀರು ಕಲ್ಲುಗಳೂ, ಲೋಹ ನಿಧಿ ನಿಕ್ಷೇಪಗಳೂ ಹರಿದು ಹೋಗುತ್ತಲಿವೆ. ಅದಕ್ಕಿಂತ ಗಂಭೀರವೆಂದರೆ, ನಮ್ಮ ಮಕ್ಕಳು ನಮ್ಮಿಂದ ದೂರವಾಗಿ ಕಳೆದುಹೋಗುತ್ತಲಿದ್ದಾರೆ."[೧೬]

ಸುಬ್ಬಣ್ಣನವರ ಕನಲಿಕೆ, ಆತಂಕಗಳನ್ನು ಮೇಲಿನ ಮಾತುಗಳಲ್ಲಿ ಗುರುತಿಸುತ್ತಲೇ, ಸಮುದಾಯದ ಬಗ್ಗೆ ಅವರಿಗಿದ್ದ ಪ್ರೀತಿ, ಕಾಳಜಿ ಮತ್ತು ವಿಶ್ವಾಸವನ್ನು ಗುರುತಿಸಬಹುದು. ಒಟ್ಟಾರೆ ಸಮುದಾಯದೊಂದಿಗಿನ ಸುಬ್ಬಣ್ಣನವರ ಆಪ್ತತೆ, ಅವರ 'ಗೃಹಸ್ಥ'ದೊಂದಿಗೆ ತಳುಕು ಹಾಕಿಕೊಂಡಿರುವ ಅಂಶವನ್ನು ಕಾಣಬಹುದು.

ಇಷ್ಟೆಲ್ಲ ಹೇಳಿದ ಮೇಲೆ, ಅನಂತಮೂರ್ತಿಯವರು 'ಗೆಳೆಯ ಸುಬ್ಬಣ್ಣ'ದಲ್ಲಿ ಸುಬ್ಬಣ್ಣನವರ ಬಗ್ಗೆ ಆಡಿದ ಅಪ್ಯಾಯಾಮಾನವಾದ ಒಂದೆರಡು ಸಾಲುಗಳನ್ನು ಉಲ್ಲೇಖಿಸಬೇಕು:

"ಸುಬ್ಬಣ್ಣ ತಾನು ಬದುಕುವ ಕ್ಷೇತ್ರದ ಕ್ರಮವನ್ನೇ ಬದಲಾಯಿಸಿ ಒಂದು ಸಮುದಾಯದ ಬದುಕಿಗೆ ವಿಶೇಷ ಹೊಳಪನ್ನು ತಂದಿದ್ದಾನೆ. ಅವನ ಊರಿನ ಹುಡುಗಿಯರು ಮದುವೆಯಾಗಿ ತಾವು ಹೋಗುವ ಊರು ಬೆಂಗಳೂರು ಆಗಿದ್ದರೂ ಸಾಂಸ್ಕೃತಿಕವಾಗಿ ಅದು ತೆಳು ಎಂದು ಕೊಳ್ಳುತ್ತಾರೆಂದು ನಾನು ಕೇಳಿದ್ದೇನೆ."[೧೭]

---

೧೫ ಅದೇ, ಪು.೮೮.

೧೬ ಅದೇ, ಪು.೩೩೪.

೧೭ ಅನಂತಮೂರ್ತಿ, ಯು.ಆರ್., ಬೆತ್ತಲೆ ಪೂಜೆ ಯಾಕೆ ಕೂಡದು?, ಅಕ್ಷರ ಪ್ರಕಾಶನ, ಸಾಗರ, ೧೯೯೬, ಪು.೧೩೭.

ಸುಬ್ಬಣ್ಣನವರು ಸಮುದಾಯದೊಂದಿಗೆ ಜೀವಂತವಾಗಿ ಇಲ್ಲದಿರಬಹುದು. ಆದರೆ ಅವರ ಸಂಬಂಧ ಸಜೀವವಾಗಿದೆ.

**ಕ) ಕೋಮುವಾದ ಗ್ರಹಿಕೆಯನ್ನು ಕುರಿತು ಅವರ ಮುಖ್ಯ ಚಿಂತನೆಗಳು :**

ಸುಬ್ಬಣ್ಣನವರು ಕೋಮುವಾದವನ್ನು ಗ್ರಹಿಸುವುದು ಅವರು ತಮ್ಮ ಜೀವನದುದ್ದಕ್ಕೂ ನಂಬಿಕೊಂಡು ಬಂದ ಪರಮಮೌಲ್ಯವಾದ 'ಸಹ' ಅಥವಾ 'ಸಹ್ಯತೆ' ಎಂಬ ತಾತ್ತ್ವಿಕ ಆಸ್ತಿವಾರದ ಮೇಲೆಯೇ ಅವರ ಬಹುಮುಖ್ಯ ಆಶಯವೂ ಕೂಡ 'ಅನುಸಂಧಾನ'ದ ಮಾರ್ಗವೇ ಆಗಿದೆ. 'ಭೂತದ ಸವಾಲಿಗೆ ನಮ್ಮ ಜವಾಬು' ಲೇಖನದಲ್ಲಿ ರಾಮಜನ್ಮಭೂಮಿಯ ಬಗ್ಗೆ ಎದ್ದಿರುವ ವಿವಾದವನ್ನು ಎಲ್ಲ ಮಗ್ಗುಲುಗಳಿಂದಲೂ ವಿಮರ್ಶಿಸುತ್ತಾ ಮತ್ತೊಂದು ಹಿಟ್ಲರನ ರಕ್ತ ಪಿಪಾಸುತನವಾಗುವ ಬಗ್ಗೆ ಮುನ್ನೆಚ್ಚರಿಕೆಯನ್ನು ಸೂಚಿಸುತ್ತಾರೆ. ಗತಕಾಲದ ಸ್ಮೃತಿಗಳ ಮೂಲಕ ವರ್ತಮಾನದ ಬದುಕನ್ನು ನಾವುಗಳು ಹೇಗೆ ಅರ್ಥೈಸಿಕೊಳ್ಳುತ್ತೇವೆಯೋ, ಅದರ ಮೇಲೆ ನಮ್ಮಗಳ 'ಐಕ್ಯತೆ' ನಿಂತಿರುತ್ತದೆ ಎಂದು ಅಭಿಪ್ರಾಯ ಪಡುತ್ತಾರೆ. "ರಾಮಜನ್ಮ ಭೂಮಿಯಲ್ಲಿ ಶಂಖ ಜಾಗಟೆ ಬಡಿದು ಬಾರಿಸಿಯೊ ಯಾವ ಭೂತಗಳನ್ನೆಲ್ಲ ನಾವು ಮೇಲಕ್ಕೆಬ್ಬಿಸತೊಡಗಿದ್ದೇವೆ? ಇವತ್ತಿನ ಯಾವ ಮಹತ್ ಪ್ರಯೋಜನಕ್ಕಾಗಿ?" ಎಂದು ಕೆಂಡಾಮಂಡಲವಾಗುತ್ತಾರೆ.

ಸುಬ್ಬಣ್ಣನವರು ಕೋಮುವಾದದ ಮೂಲಭೂತ ಸ್ವರೂಪಗಳನ್ನು ಬೇರೆ ಬೇರೆ ಸ್ತರಗಳಲ್ಲಿ ಬರಹಗಳು ಮತ್ತು ಭಾಷಣಗಳಲ್ಲಿ ಅನುಷಂಗಿಕವಾಗಿ ತಮ್ಮ ಚಿಂತನಾಲಹರಿಯನ್ನು ತೇಲಿಬಿಟ್ಟಿದ್ದಾರೆ. ಅಲ್ಲದೆ ಸಮಯ ಬಂದಾಗ ಬೀದಿಯಲ್ಲಿಯೂ ತಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದಾರೆ. ಕೋಮುವಾದದ ಸ್ವರೂಪವನ್ನು ಕೇವಲ ಧರ್ಮಗಳಿಗೆ ಸಂಬಂಧಿಸಿದಂತೆ ಮಾತ್ರ ನೋಡದೆ, ಅದಕ್ಕೂ ಮೀರಿದ ಆಯಾಮಗಳ ಮೂಲಕ ನೋಡುತ್ತಾರೆ. ಸಾಂಸ್ಕೃತಿಕ, ಸಾಮಾಜಿಕ ಮತ್ತು ರಾಜಕೀಯ ನೆಲೆಗಳು ಅವರಿಗೆ ಮುಖ್ಯವಾಗುತ್ತವೆ. ಹಾಗಾಗಿಯೆ ಅವರು ವರ್ಗ-ವರ್ಗಗಳ ನಡುವಿನ ಅನೇಕ ಸೂಕ್ಷ್ಮತೆಗಳನ್ನು ಮತ್ತು ಅದರೊಳಗಿನ ಅಸಮಾನತೆಗಳನ್ನು ಅನಾವರಣಗೊಳಿಸುತ್ತಾ ಹೋಗುವುದು.

ಹಿಂದೂ -ಮುಸ್ಲಿಂರ ಸಮಸ್ಯೆಗಳನ್ನು, ಸಮಸ್ಯೆಗಳನ್ನಾಗಿ ಬೆಳೆಸುವುದಲ್ಲ; ಪ್ರೀತಿ, ವಿಶ್ವಾಸ, ನಂಬಿಕೆ, ಸಹಬಾಳ್ವೆ, ಸೈರಣೆ ಮತ್ತು ವಿನಯವಂತಿಕೆ ಮುಂತಾದ ಮೌಲ್ಯಗಳು ಮುಖ್ಯವಾಗುತ್ತವೆ. ಸುಬ್ಬಣ್ಣನವರ ಆತಂಕ, ಕಳವಳ ಮತ್ತು ಎಚ್ಚರ ಇದು:

"ರಾಮಮಂದಿರ ಕಟ್ಟಿ ನಾವು ಹಿಂದೂಗಳನ್ನು ಇತರರನ್ನು ಪಕ್ಷ ಪ್ರತಿಪಕ್ಷವಾಗಿ ನಿಲ್ಲಿಸುತ್ತೇವೆ, ಶಾಶ್ವತ ಕುರುಕ್ಷೇತ್ರ ರಚಿಸುತ್ತೇವೆ. ಈ ದೇಶದ ಎಪ್ಪತ್ತು ಕೋಟಿ ಜನ ಇವತ್ತಿಂದ ಮುಂದೆ ಎಂದೂ ಪರಸ್ಪರ ನಂಬಿ ಒಟ್ಟಾಗಿ ಬದುಕದ ಹಾಗೆ ಮಾಡುತ್ತೇವೆ. ಕ್ರಮೇಣ ನಂದಿಹೋಗಬಹುದಾದ ಭೂತದ ಹಗೆ ಸೇಡು ಹಿಂಸೆಗಳ ಕಿಚ್ಚನ್ನು ವರ್ತಮಾನದಲ್ಲಿ ಹೊಸದಾಗಿ ಊದಿ ಉರಿಸಿಕೊಂಡು ನಮ್ಮಲ್ಲಿ ಮಾತ್ರವಲ್ಲ ನಮ್ಮ ಬಸಿರಿನ ಪಿಂಡಗಳಲ್ಲಿ ಅನಂತಕಾಲ ಪರ್ಯಂತ ಅದನ್ನು ಸ್ಥಿರ ಸ್ಥಾಪಿಸಿಕೊಳ್ಳುತ್ತೇವೆ."[೧೮]

---

[೧೮] ಕೆ.ವಿ. ಸುಬ್ಬಣ್ಣ-ಲೇಖನ ಸಂಕಲನ, ೧೯೫೪-೨೦೦೪, ಅರೆಶತಮಾನದ ಅಲೆಬರಹಗಳು, ಸಂಪಾದನೆ- ಟಿ.ಪಿ. ಅಶೋಕ, ಅಕ್ಷರ ಪ್ರಕಾಶನ, ಸಾಗರ, ೨೦೦೪, ಪು.೧೫೮.

ಮತ್ತು ಸುಬ್ಬಣ್ಣನವರು ಪ್ರತಿಪಾದಿಸುವ ಅನುಸಂಧಾನ ಮಾರ್ಗ ಇದು :

"... ನಾವು ಭಿನ್ನತೆಯನ್ನು ವಿರೋಧಿಸುವವರು, ಐಕ್ಯಕ್ಕಾಗಿ ಕಾತರಿಸುವವರು ಎನ್ನುವುದನ್ನು ಅವರಿಗೆ ಮನದಟ್ಟು ಮಾಡಿಕೊಡಬೇಕು. ಇದು ಪ್ರೀತಿಯಿಂದ ತಾಳ್ಮೆಯಿಂದ ಸಾವಕಾಶವಾಗಿ ಆಗಬೇಕಾದ ಕೆಲಸ. ಪರಸ್ಪರ ನಂಬಿಕೆಯ ವಾತಾವರಣ ನಿರ್ಮಾಣವಾದರೆ ಭಿನ್ನತೆಯನ್ನು ನಿವಾರಿಸುವುದು ಸುಲಭ. ಮುಸ್ಲಿಮರು ಹಿಂದೂಗಳಿಗಿತ ಹೆಚ್ಚು ಧರ್ಮಾಂಧರು ಎಂದು ಈಗ ನಾವು ಅವರೆದುರು ಹೇಳಿದರೆ, ಅದು ಸತ್ಯವಿದ್ದರೂ ಸದ್ಯದ ಸಂಶಯದ ವಾತಾವರಣದಲ್ಲಿ ಅವರಿಗೆ ಅದು ವಾಸ್ತವದ ಹೇಳಿಕೆಯಾಗುವುದಿಲ್ಲ. ತಮ್ಮ ಧರ್ಮವನ್ನು ತುಚ್ಛೀಕರಿಸುವ ನಿಂದನೆಯಾಗುತ್ತದೆ. ಒಮ್ಮೆ ವಿಶ್ವಾಸದ ವಾತಾವರಣ ನಿರ್ಮಾಣವಾದರೆ ಆಮೇಲೆ ನಾವು ವಾಸ್ತವಗಳನ್ನು ಸತ್ಯಗಳನ್ನು ಪರಸ್ಪರ ಚರ್ಚಿಸಿ ಕೊಳ್ಳಬಹುದು, ನಮ್ಮನ್ನು ಸುಧಾರಿಸಿಕೊಳ್ಳಬಹುದು."[೧೯]

ಹಿಂಸೆ, ಕ್ರೌರ್ಯತೆ ಎಂಬವುಗಳು ನಮ್ಮ ಪರಿಸರ, ಜೀವನಕ್ರಮ ಮತ್ತು ನಮ್ಮ ಮನಸ್ಸಿನಲ್ಲೇ ಸ್ಥಾಪಿತವಾಗಿರುವಂತಹುಗಳು. ಈ ಮನುಷ್ಯ ಹಿಂಸೆಯನ್ನು ಶಸ್ತ್ರಾಸ್ತ್ರಗಳು ಅಥವಾ ಆಯುಧಗಳ ಮೂಲಕ ವ್ಯಕ್ತಪಡಿಸುತ್ತಾನೆಯಷ್ಟೇ. ಹಿಂಸೆಯಲ್ಲಿ ನೇರವಾಗಿ ತೊಡಗಿಕೊಂಡವರು ಮಾತ್ರವೇ ಹಿಂಸೆಗೆ ಕಾರಣರಾಗಿರುವುದಿಲ್ಲ' ಗೊತ್ತಿದ್ದೋ ಅಥವಾ ಗೊತ್ತಿಲ್ಲದೆಯೋ ಪರೋಕ್ಷವಾಗಿಯಾದರೂ ಎಲ್ಲರೂ ಕಾರಣರಾಗಿರುತ್ತೇವೆ. ಹಾಗಾಗಿ 'ಹಿಂಸೆ' ಎಂಬುದು ಎಲ್ಲೋ ಸಂಭವಿಸಿದ ಒಂದು ಸ್ಥಳಕ್ಕಷ್ಟೇ ಅನ್ವಯಿಸದೆ ಎಲ್ಲ ಸ್ಥಳಗಳಿಗೂ ಅದು ಅನ್ವಯಿಸುತ್ತದೆ. ಸುಬ್ಬಣ್ಣನವರು 'ಗುಜರಾತ್ ಸ್ವಗತ' ಎಂಬ ಲೇಖನದಲ್ಲಿ, 'ನನ್ನೊಳಗಿನ ಗುಜರಾತನ್ನು ನಾನು ಕಂಡುಕೊಳ್ಳಬೇಕು' ಎಂದು ತನ್ನೊಳಗೆ ತಾನು ಮಾತಾಡಿಕೊಳ್ಳುವುದನ್ನು ಈ ನೆಲೆಯಲ್ಲಿ ಅರ್ಥೈಸಬೇಕು. ಈ ರೀತಿ ತೀರ ಭಿನ್ನವಾಗಿ ಚಿಂತಿಸುವುದರಿಂದಲೇ ಅವರು, ಉಳಿದವರಿಗಿಂತ ಮಹತ್ವದವರಾಗಿ ನಿಲ್ಲುವುದು.

ಸುಬ್ಬಣ್ಣನವರು 'ಕನ್ನಡವು ದಕ್ಕಿಸಿಕೊಂಡ ಅರಿವು ಮತ್ತು ಎಚ್ಚರ'ದಲ್ಲಿ ಜಾನಪದ ಕಿರುಕಥನವಾದ 'ಗೋವಿನ ಹಾಡ'ನ್ನು ಅರ್ಥೈಸಿರುವ ರೀತಿ ಇಲ್ಲಿ ನೆನಪಾಗುತ್ತದೆ. ಕ್ರೌರ್ಯ ಮತ್ತು ಮುಗ್ಧತೆ ಎರಡನ್ನು ಪರಸ್ಪರ ಮುಖಾಮುಖಿಯನ್ನಾಗಿಸಿ, ಹಿಂಸೆಯನ್ನು ಅಹಿಂಸೆಯಿಂದ ಜಯಿಸುವ ರೀತಿಯನ್ನು ಹೊಸ ಓದಿನ ಮೂಲಕ ವಿಶ್ಲೇಷಿಸುತ್ತಾರೆ. ಕೋಮುವಾದವನ್ನು ನಾವು ಗಾಂಧೀಜಿಯವರ 'ಅಹಿಂಸೆ'ಯ ಮೂಲಕ ಬಗೆಹರಿಸಿಕೊಳ್ಳಬೇಕಿದೆ. ಸುಬ್ಬಣ್ಣನವರರೊಳಗೊಂಡಂತೆ, ಲಂಕೇಶ್, ಅನಂತಮೂರ್ತಿ, ಮೊದಲಾದವರಿಗೂ ಸಹ 'ಅಹಿಂಸೆ'ಯೇ ಪ್ರಧಾನ ಆಶಯವಾಗಿದೆ. ಹಾಗಾಗಿ ಈ ಮೂರು ಜನರು ಕೋಮುವಾದದ ಸ್ವರೂಪವನ್ನು ಕುರಿತು ಮಾತಾನಾಡುವಾಗ ಗಾಂಧೀಜಿಯವರನ್ನು ತಮ್ಮ ಕೇಂದ್ರಪ್ರಜ್ಞೆಗೆ ತಂದುಕೊಳ್ಳುತ್ತಾರೆ ಎನ್ನುವುದು ಗಮನಾರ್ಹ.

ಸ್ವಾತಂತ್ರ್ಯೋತ್ತರದ ಸಂದರ್ಭದಲ್ಲಿ, ಪ್ರಾಯಃ ಗಾಂಧೀಜಿಯವರು ಮುಸ್ಲಿಮರ ಪರವಾಗಿ ಉಪವಾಸ ಸತ್ಯಾಗ್ರಹ ನಡೆಸದಿದ್ದರೆ, ಅವರು ಕೊಲೆಯಾಗಿ ಸಾಯುತ್ತಿರಲಿಲ್ಲ. ಭಾರತವು ಬಹು ಸಂಸ್ಕೃತಿಯ ಲಕ್ಷಣಗಳಿಂದ ಕೂಡಿದ ರಾಷ್ಟ್ರ ಎಂಬ ಅರಿವು ಗಾಂಧೀಜಿಯವರಿಗಿತ್ತು. ಅನ್ಯ ಸಂಸ್ಕೃತಿ ಮತ್ತು ಅನ್ಯಧರ್ಮಗಳ ಮೇಲಿನ ಆಕ್ರಮಣವನ್ನು ಅವರು ಸಹಿಸುತ್ತಿರಲಿಲ್ಲ. ವರ್ತಮಾನವು ಶಾಂತಿ, ಸೌಹರ್ತತೆಯಿಂದ ಬಾಳಿಕೊಂಡು

---

[೧೯] ಅದೇ, ಪು.೧೬೦.

ಹೋಗಬೇಕೆಂಬ ನಿಲುವು ಅವರದಾಗಿತ್ತು. ದೇವರ ಹೆಸರಿನಲ್ಲಿ ನಡೆಯುವ ಗಲಭೆಗಳು ವಿವೇಕಹೀನ ಎಂದು ತಿಳಿದಿದ್ದರು. ಗಾಂಧೀಜಿಯವರು ಆರಂಭದಲ್ಲಿ 'ದೇವರು ಸತ್ಯ' ಎಂದು ನಂಬಿಕೊಂಡು, ನಂತರ 'ಸತ್ಯವೇ ದೇವರು' ಎಂದು ಬದಲಾದ ಅವರ ನಂಬಿಕೆಯ ಬಗ್ಗೆ ಪ್ರಸ್ತಾಪಿಸುತ್ತಾ ಅನಂತಮೂರ್ತಿಯವರು ". . .ತನ್ನ ದೇವರು ಮಾತ್ರ ಸತ್ಯ ಎಂದು ತಿಳಿದ ನಂತರ ಉಳಿದ ಎಲ್ಲ ದೇವರುಗಳೂ ಸುಳ್ಳು ಎನ್ನುವುದು ತರ್ಕಬದ್ಧವಾದ ಮುಂದಿನ ಹೆಜ್ಜೆಯಾಗುತ್ತದೆ. ಅದು 'ಮೂಲಭೂತವಾದ'ಕ್ಕೆ (Fundamenatalism) ಎಡೆಮಾಡಿಕೊಡುತ್ತದೆ"[೨೦] ಎಂದು ಹೇಳುತ್ತಾರೆ.

ಕುರ್ತಕೋಟಿಯವರು ಗುಜರಾತಿನಲ್ಲಿ ಸಂಭವಿಸಿದ ಗಲಭೆ ಮತ್ತು ಹಿಂಸೆಯನ್ನು ಕೇಂದ್ರವಾಗಿಟ್ಟುಕೊಂಡು 'ನಾಯಂ ಹಂತಿನ ಹನ್ಯತೇ' ಎಂಬ ಭಗವದ್ಗೀತೆಯ ಅಣಕದ ಮೂಲಕ ಹಿಂಸೆಯನ್ನು ಅದ್ಭುತವಾಗಿ ವಿವರಿಸುತ್ತಾರೆ. ಕುರ್ತಕೋಟಿಯವರ ಪ್ರಕಾರ ಸಂಘಟನೆಯೂ ಒಂದು ಕೋಮು (ಇದನ್ನು ಮುಂದೆ ವಿವರಿಸುತ್ತೇನೆ). ಸಂಘಟನೆಯು ಕೂಡ ದ್ವೇಷ, ಅಸೂಯೆ ಮತ್ತು ರೋಷದ ಕಿಚ್ಚುಗಳನ್ನು ಹೊತ್ತಿಸಬಲ್ಲದು. ಮತ್ತೊಬ್ಬ ಆಧುನಿಕ ಚಿಂತಕರಾದ ಲಂಕೇಶರು ಕೋಮುವಾದದೊಂದಿಗೆ ತಳುಕು ಹಾಕಿಕೊಂಡಿರುವ ಹಿಂಸೆಯನ್ನು ಅರ್ಥೈಸುತ್ತಾ, 'ಇಟ್ಟಿಗೆ ಪವಿತ್ರವಲ್ಲ; ಜೀವಪವಿತ್ರ' ಎನ್ನುತ್ತಾರೆ. ಲಂಕೇಶರಿಗೆ ಹಿಂದೂಧರ್ಮದ ಇತಿಹಾಸದ ಆಂತರ್ಯದೊಳಗಿರುವ ಕರಾಳಕೃತ್ಯಗಳು ಶಂಕರಾಚಾರ್ಯರ ಅವಿವೇಕತನದ ಮೂಲಕ ತಿಳಿಯುತ್ತದೆ. ವಾಸ್ತವದಲ್ಲಿ, ಇತಿಹಾಸಕ್ಕೆ ದ್ರೋಹ ಬಗೆಯುವ ಭಾ.ಜ.ಪ., ಭಜರಂಗದಳ ಮತ್ತು ಆರ್.ಎಸ್.ಎಸ್.ನವರು ಅಖಂಡ ಭಾರತವನ್ನು ಒಡೆಯುತ್ತಾ ಕರಾಳ ಇತಿಹಾಸವನ್ನಷ್ಟೇ ಸೃಷ್ಟಿಸುವ ನೀಚರು ಎಂದು ಲಂಕೇಶರು ಸಿಟ್ಟಿಗೇಳುತ್ತಾರೆ. ಮತ್ತೊಬ್ಬ ಚಿಂತಕರಾದ ಅನಂತಮೂರ್ತಿಯವರು ಕಬೀರ, ತುಳಸೀದಾಸ, ಗುರುನಾನಕ್ ಮತ್ತು ಗಾಂಧೀಜಿಯವರನ್ನು ತಮ್ಮ ಕೇಂದ್ರಪ್ರಜ್ಞೆಗೆ ತಂದುಕೊಂಡು, ಕೋಮುವಾದದ ಸ್ವರೂಪವನ್ನು ವಿವರಿಸುತ್ತಾರೆ, ಸತ್ಯವನ್ನು ದೇವರನ್ನಾಗಿ ನಂಬಿಕೊಂಡು ಆಧ್ಯಾತ್ಮಿಕತೆಯ ಮೂಲಕ ಕೋಮುಗಲಭೆಗೆ ಪರಿಹಾರವನ್ನು ಕಂಡುಕೊಳ್ಳುತ್ತಾರೆ.

ಸುಬ್ಬಣ್ಣನವರು ಕೋಮುವಾದದ ಮೂಲ ಸ್ವರೂಪವನ್ನು ಧರ್ಮ-ಧರ್ಮಗಳ ನಡುವೆ ಮಾತ್ರವಲ್ಲದೆ, ವರ್ಗ-ವರ್ಗಗಳ ನಡುವಿನ ಕಲಹದಲ್ಲಿ ಮತ್ತು ಅದರ ಸೂಕ್ಷ್ಮವಾದ ಅಸಮಾನತೆಗಳಲ್ಲಿ, ಶ್ರೇಷ್ಠ-ಕನಿಷ್ಠ ಎಂಬ ಶ್ರೇಣಿಕೃತದಲ್ಲಿ ಕಂಡುಕೊಳ್ಳುತ್ತಾರೆ. ಅಂದರೆ ಸುಬ್ಬಣ್ಣನವರು ಉಳಿದವರಿಗಿಂತ ಭಿನ್ನರಾಗಿ, ಮಹತ್ವದವರಾಗಿ ಕಾಣುವುದು ಅವರ ಈ ರೀತಿಯ ಚಿಂತನೆಯಿಂದಲೇ. ಧರ್ಮ-ಧರ್ಮಗಳ ನಡುವೆ ಸಂಭವಿಸುವ ಕೋಮುಗಲಭೆ ಎಂದಾದರೊಮ್ಮೆ ಎಲ್ಲರಿಗೂ ಗೊತ್ತಾಗುವಂತೆ ನಡೆದುಹೋಗುತ್ತದೆ. ಆದರೆ ಒಂದು ಸಮುದಾಯದಲ್ಲಿ ಜಾತಿ-ಜಾತಿಗಳ ನಡುವೆ ಸಂಭವಿಸುವ ಶೀತಲ ಕೋಮುಗಲಭೆಗಳು ನಮ್ಮೆಲ್ಲರ ಪ್ರಜ್ಞೆಗೆ (ನಮ್ಮಗಳ ಮಧ್ಯೆ ಸಂಭವಿಸಿದ್ದರೂ) ಬಂದಿರುವುದೇ ಇಲ್ಲ. ಅಲ್ಲಿನ ಸೂಕ್ಷ್ಮತೆಗಳು ಹೆಚ್ಚು ಸಂಕೀರ್ಣವಾಗಿರುತ್ತವೆ. ಗುಜರಾತ್‌ನಲ್ಲಿ ಕೋಮುಗಲಭೆ, ಹಿಂಸೆ ಸಂಭವಿಸಿದರೆ, ಸುಬ್ಬಣ್ಣನವರಿಗೆ ಅದು ತನ್ನ ಆತ್ಮವನ್ನು ಪರಿಶುದ್ಧ (ಗಾಂಧೀಜಿ ಹೇಳುವ) ಮಾಡಿಕೊಳ್ಳುವ ಸ್ವಗತವಾಗಿ ತೋರುತ್ತದೆ. "ಒಳಗಿರುವ ಗುಜರಾತಿನ ಕಡೆ ತಿರುಗದೆ ಪರಾಙ್ಮುಖನಾಗಿ, ಹೊರ ಗುಜರಾತಿನ ಬಗ್ಗೆಯೇ ಲಂಪಟನಾಗಿ

---

೨೦ ಅನಂತಮೂರ್ತಿ, ಯು.ಆರ್., ಬೆತ್ತಲೆಪೂಜೆ ಯಾಕೆ ಕೂಡದು?, ಅಕ್ಷರ ಪ್ರಕಾಶನ, ಸಾಗರ, ೧೯೯೬, ಪು.೧೦೧.

ಬಿಟ್ಟದ್ದೇನೆಯೋ?''[೨೧] ಎಂದು ಆಂತಕದಿಂದ ಕನಲುತ್ತಾರೆ. ಪ್ರತಿನಿತ್ಯವೂ ಮನುಷ್ಯರಲ್ಲಿ ಈ ರೀತಿಯ 'ಸ್ವಗತ' ಸ್ಫೋಟಗೊಳ್ಳದ ಹೊರತು, ಮನುಷ್ಯರ ನಡುವಿನ ಸಂಬಂಧಗಳು ಆರೋಗ್ಯಪೂರ್ಣವಾಗಿರುವುದಿಲ್ಲ ಎಂದು ಹೇಳಬಹುದು.

ಕೋಮುವಾದದ ಸ್ವರೂಪವನ್ನು ನಾವು ಅರ್ಥೈಸಿಕೊಳ್ಳುವಾಗ 'ಸಣ್ಣ'ದೆಂದು ಭಾವಿಸಿದ್ದೆಲ್ಲ ಹೇಗೆ ಸಂಘರ್ಷಕ್ಕೆ ಎಡೆಮಾಡಿಕೊಡುತ್ತದೆ ಎಂಬುದನ್ನು ಕಾಣಬೇಕು. ಉದಾಹರಣೆಗೆ 'ಸಂಘಟನೆ'ಗಳನ್ನು ನೋಡಬಹುದು. ಇವುಗಳು ಕೂಡ 'ಅನ್ಯ'ವನ್ನು ದ್ವೇಷಿಸುತ್ತಾ, 'ನನ್ನದು' ಎಂಬ ಭಾವನೆಯನ್ನು ಪೋಷಿಸಿಕೊಂಡು, ಬಾಳಿಸಿಕೊಂಡು ಹೋಗುವಂತಹದ್ದು. ಜಾತಿ-ಉಪಜಾತಿಗಳ ಸಂಘಟನೆಗಳು, ಅವುಗಳೊಂದಿಗೆ ತಳುಕು ಹಾಕಿಕೊಂಡಿರುವ ಸೂಕ್ಷ್ಮತೆಗಳನ್ನು ಬಹಳ ಎಚ್ಚರದಿಂದ ಅರಿತುಕೊಳ್ಳಬೇಕಾಗುತ್ತದೆ. ಆರ್.ಎಸ್.ಎಸ್.ನ ಕಾರ್ಯವೈಖರಿ, ಭಜರಂಗದಳವರು ವರ್ತಿಸುವ ರೀತಿ ಮತ್ತು ಹಂಚುವ 'ತ್ರಿಶೂಲ', ಹಣೆಗೆ ಇಟ್ಟುಕೊಳ್ಳುವ 'ಕುಂಕುಮ' ಮುಂತಾದ ಸೂಕ್ಷ್ಮತೆಗಳನ್ನೆಲ್ಲಾ 'ಬಲಿ'ಗೆ ಸಂಕೇತಗಳಾಗಿ ಇರುವುದನ್ನು ಕಾಣಬೇಕಾಗುತ್ತದೆ. ಇವೆಲ್ಲವೂ ಕ್ರೌರ್ಯ, ಹಿಂಸೆಗಳನ್ನು ಉದ್ದೀಪಿಸುವ ಸಾಧನಗಳಾಗಿ ಕೆಲಸ ಮಾಡುತ್ತವೆ. ಅಲ್ಲದೆ ಅವರ 'ಘೋಷಾ' (ಸ್ಲೋಗನ್) ವಾಕ್ಯಗಳು ಕೂಡ 'ಗರ್ವ'ದಿಂದಲೇ ಹುಟ್ಟಿ ಕೊಂಡಂತಹುವುಗಳಾಗಿವೆ. ಭಾರತದ ವಿಶಿಷ್ಟ ಲಕ್ಷಣವಾದ ಏಕತೆಯೊಳಗಿನ ಅನೇಕತೆಯನ್ನು ಒಡೆಯಲು ಸ್ಥಾಪಿತಗೊಂಡ ಇಂತಹ ಸಂಘಟನೆಗಳು ಕೋಮುಗಲಭೆಯನ್ನು ಅವಿಚ್ಛಿನ್ನವಾಗಿ ಜೀವಂತವಾಗಿಡಲು ತವಕಿಸುತ್ತಿರುತ್ತವೆ.

ಪ್ರಾರಂಭದಲ್ಲಿ ಹೇಳಿದ ಹಾಗೆ ಸುಬ್ಬಣ್ಣನವರು 'ಅನ್ಯ' ಮತ್ತು 'ಸ್ವ' ಎಂಬ ಭಾವನೆಗಳ ಮೂಲಕ ಕೋಮುವನ್ನು ವಿವರಿಸಿಕೊಳ್ಳುವಾಗ ಎಲ್ಲ ಧರ್ಮಗಳ ಮನುಷ್ಯರಲ್ಲಿರುವ ಕೇಡು, ನೀಚತನದ ಬಗ್ಗೆ ಆತಂಕ ವ್ಯಕ್ತಪಡಿಸುತ್ತಾರೆ. ಜಾತಿ ವ್ಯವಸ್ಥೆಯಲ್ಲಿ ತಳವರ್ಗದವರು 'ಅನ್ಯ'ಆದರೆ, ಧರ್ಮದಲ್ಲಿ ಅಲ್ಪಸಂಖ್ಯಾತರು 'ಅನ್ಯ'ರೆಂದು ಪರಿಗಣಿಸಲ್ಪಡುತ್ತಾರೆ. ಇದು ನಮ್ಮೆಲ್ಲರನ್ನು ಅಸಮಾನತೆಯ ಮಟ್ಟಕ್ಕೆ ಕೊಂಡೊಯ್ದು ಜನಾಂಗೀಯ ಸೇಡನ್ನು ಬಿತ್ತುತ್ತದೆ. ಕ್ರಮೇಣ ಈ ಸೇಡು ಅವಕಾಶ ಒದಗಿಬಂದ ಸಂದರ್ಭದಲ್ಲಿ ಜಾಗೃತಗೊಂಡು ರಕ್ತಪಾತಕ್ಕೆ ಸಜ್ಜುಗೊಳ್ಳುತ್ತದೆ. ಈ ಹಿಂಸೆಗಳಿಗೆ ರಾಜಕೀಯವೂ ಸೇರಿಕೊಂಡು ಕ್ರೌರ್ಯ ವೈಭವೀಕರಿಸುತ್ತದೆ. ಆದರೂ ನಾವುಗಳೆಲ್ಲ ಒಟ್ಟಿಗೆ ಪರಸ್ಪರ ಹೇಗೋ ಬಾಳಿಕೊಂಡು ಬಂದಿದ್ದೇವೆ ಎಂಬುದೆ ಕುತೂಹಲ, ವಾಸ್ತವಸತ್ಯ ಎಂಬ ವಿಸ್ಮಯವನ್ನು ಸುಬ್ಬಣ್ಣನವರು ವ್ಯಕ್ತಪಡಿಸುತ್ತಾರೆ.

ಸುಬ್ಬಣ್ಣನವರ ಮುಖ್ಯ ಆಶಯ ಇದು:

"ನಮ್ಮ ಹಿಂದುಳಿದ ವರ್ಗಗಳಲ್ಲಿನ ತರುಣರು ಹಿಂದೂ ಧರ್ಮಾಂಧತೆಯನ್ನು (ಅಂತರಂಗ ಮತ್ತು ಬಹಿರಂಗ ಭಿನ್ನತೆಗಳನ್ನು) ಧಿಕ್ಕರಿಸಿ ನಿಲ್ಲಬೇಕು. ನಮ್ಮ ಮುಂದುವರಿದ ವರ್ಗಗಳಲ್ಲಿನ ತರುಣರು ತಮಗೆ

---

[೨೧] ಕೆ.ವಿ. ಸುಬ್ಬಣ್ಣ- ಲೇಖನ ಸಂಕಲನ ೧೯೫೪-೨೦೦೪, ಅರೆಶತಮಾನದ ಅಲೆಬರಹಗಳು, ಸಂಪಾದನೆ- ಟಿ.ಪಿ. ಅಶೋಕ, ಅಕ್ಷರ ಪ್ರಕಾಶನ, ಸಾಗರ, ೨೦೦೪, ಪು.೧೩೫.

ಅಗತ್ಯ ಆಗಲೇ ಬೇಕಾಗಿರುವ ಸಾಮಾಜಿಕ ಸಂಸ್ಕಾರಕ್ಕೆ ತಾವೇ ಚಡಪಡಿಸಿ ಮುಂದಾಗಬೇಕು. ಹೀಗೆ ನಮ್ಮ ತರುಣರೇ ನಮ್ಮ ಭೂತವನ್ನು ವರ್ತಮಾನಕ್ಕೆ ಪಳಗಿಸಬೇಕು."[೨೨]

ಕೋಮುವಾದ ಮತ್ತು ಜಾತೀಯತೆ ಎರಡೂ ನೆಲೆಗಳನ್ನು ಕುರಿತಂತೆ ಸುಬ್ಬಣ್ಣನವರು ಯುವ ಪೀಳಿಗೆಗೆ ನೀಡುವ ಕರೆ ಮತ್ತು ಆ ಮೂಲಕ ಇಟ್ಟುಕೊಂಡಿರುವ ಭರವಸೆ ಮೇಲಿನ ಮಾತುಗಳಲ್ಲಿ ವ್ಯಕ್ತವಾಗುತ್ತದೆ. ಭೂತಕಾಲದ ಸ್ಮೃತಿಗಳಿಂದ ವರ್ತಮಾನದ ಬದುಕನ್ನು ಶಾಂತಿ, ಸೌಹಾರ್ದದಿಂದ ಜೀವನವನ್ನು ಸುಂದರವಾಗಿ ಅರಳಿಸಿಕೊಳ್ಳಬೇಕಾದವರು ಯುವಪೀಳಿಗೆಯೇ. ಇತಿಹಾಸವು ಕಲಹ, ಹಗೆತನ ಮತ್ತು ಕ್ರೌರ್ಯತೆಯನ್ನು ತನ್ನ ಮಡಿಲೊಳಗೆ ಇಟ್ಟುಕೊಂಡಿದೆ. ವರ್ತಮಾನದಲ್ಲಿ ನಾವು ಹಿಂದಿನದನ್ನೇ ಮುಂದುವರಿಸಿಕೊಂಡು ಹೋಗದೆ ವಿವೇಕದಿಂದ ಪರಸ್ಪರ ಜೀವಿಸಬೇಕಾಗುತ್ತದೆ.

ಸುಬ್ಬಣ್ಣನವರಿಗೆ 'ಹಿಂದೂ' ಮುಖ್ಯವಲ್ಲ' ವಿಶ್ವದ ನಾವೆಲ್ಲ 'ಒಂದು' ಎನ್ನುವುದು ಮುಖ್ಯವಾಗುತ್ತದೆ. ಸಮುದಾಯ ವಿವೇಕದಿಂದ ನಿಷ್ಪನ್ನಗೊಂಡ ಈ ಮಾತು ಜೀವನ ಪ್ರೀತಿಯನ್ನು ಮನಗಾಣಿಸುತ್ತದೆ ಎನ್ನಬಹುದು.

---

[೨೨] ಅದೇ, ಪು.೧೬೬.

## ಅಧ್ಯಾಯ-೪

# ಅನುವಾದವನ್ನು ಕುರಿತು ಸುಬ್ಬಣ್ಣನವರ ಗ್ರಹಿಕೆಗಳು

ಕೆ.ವಿ. ಸುಬ್ಬಣ್ಣನವರ ಹಲವಾರು ಸೃಜನಶೀಲ ಚಟುವಟಿಕೆಗಳಲ್ಲಿ ಅನುವಾದ ಕಾರ್ಯವೂ ಒಂದು. ಬೇರೆ ಭಾಷೆಯಲ್ಲಿ ಲಭಿಸುವ ಉತ್ತಮಾಂಶಗಳನ್ನು ಕನ್ನಡ ಭಾಷೆಗೆ ಭಾಷಾಂತರಿಸುವುದು ಅವರ ಇಷ್ಟವಾದ ಕೆಲಸವೆ ಆಗಿತ್ತೆನಿಸುತ್ತದೆ. ಇಂತಹ ಕೆಲಸವನ್ನು ವೈಯಕ್ತಿಕ ಅಪೇಕ್ಷೆಗಿಂತ ಹೆಚ್ಚಾಗಿ ಸಮುದಾಯದ ತುರ್ತಿನಿಂದ ಕೈಗೊಂಡಿದ್ದಾಗಿದೆಯೆಂಬುದನ್ನು ಗಮನಿಸಬೇಕು. ಅದರಲ್ಲೂ ಅನುವಾದದಂತಹ ಕಾರ್ಯದಲ್ಲಿ ಸುಬ್ಬಣ್ಣನವರು ಆಯ್ಕೆ ಮಾಡಿಕೊಂಡ ಪುಸ್ತಕಗಳನ್ನು ಗಮನಿಸಿದರೆ ಅವು ಅವರ ದೃಷ್ಟಿಕೋನವನ್ನು ಚಿತ್ರಿಸುತ್ತವೆ. ಬ್ರೆಕ್ಟ್‌ನ ನಾಟಕಗಳ ಅನುವಾದ ('ಸೆಜುವಾನ್ ನಗರದ ಸಾಧ್ವಿ', 'ತಾಯಿ', 'ಮೂರು ಕಾಸಿನ ಸಂಗೀತ ನಾಟಕ') ಲೋಹಿಯಾರ ಬರಹಗಳ ಅನುವಾದ (ರಾಜಕೀಯದ ಮಧ್ಯೆ ಬಿಡುವು), ಶೇಕ್ಸ್‌ಪಿಯರ್ ಅನುವಾದ (ಅಥೆನ್ಸ್ ಅರ್ಥವಂತ), ರಶೊಮೋನ್, ಹಿರೋಷಿಯಾ ಮಾನ್ ಅಮೋರ್, ಬ್ಯಾಟಲ್ ಶಿಪ್ ಪೋಚೆಮ್ ಕಿನ್, ಬೈಸಿಕಲ್ ಥೀವ್ಸ್ - ಮೊದಲಾದ ಆಧುನಿಕ ಚಲನಚಿತ್ರಗಳ ಚಿತ್ರಕಥಾನಕಗಳು, ಕಾಳಿದಾಸನ 'ಅಭಿಜ್ಞಾನ ಶಾಕುಂತಲಾ'ದ ಅನುವಾದ (ಲೋಕ ಶಾಕುಂತಲಾ), ಮತ್ತು ರೆಘುನ್‌ನ ಕತೆಗಳು ಒಗಟುಗಳ ಅನುವಾದ, ಗೋರ್ಕಿ ಕತೆಗಳು ಹಾಗೂ ಗಾಂಧೀಜಿಯವರ ಬರಹಗಳನ್ನು ಕನ್ನಡಕ್ಕೆ ತಂದಿದ್ದಾರೆ. ಹೀಗೆ ಅವರ ಅನುವಾದ ಪುಸ್ತಕಗಳ ಜೊತೆಗೆ, ಅನುವಾದ ಪುಸ್ತಕಗಳಿಗೆ ಬರೆದ ಮುನ್ನುಡಿಗಳು ಮುಖ್ಯವಾಗುತ್ತವೆ.

ಅನುವಾದ ಅಥವಾ ಭಾಷಾಂತರವು ಸೃಜನಶೀಲ ಚಟುವಟಿಕೆಯ ಒಂದು ಭಾಗವೇ ಆಗಿದೆ. ಉಭಯ ಭಾಷೆಗಳ ನಡುವೆ ನಡೆಯುವ ಸಾಂಸ್ಕೃತಿಕ ವಿನಿಮಯವಾಗಿದೆ. ಕೃತಿಕಾರ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ತರುವಾಗ ಮೂಲ ಆಶಯಕ್ಕಿಂತ ಭಿನ್ನವಾದ ಮಾರ್ಪಾಡುಗಳನ್ನು ಮಾಡಿಕೊಂಡು ತನ್ನ ಸ್ವಭಾಷಾ ಸಂಸ್ಕೃತಿಯ ಪರಿಸರಕ್ಕೆ ಒಗ್ಗಿಸಿಕೊಳ್ಳುತ್ತಾನೆ. ಎಲ್ಲಕ್ಕಿಂತ ಹೆಚ್ಚಾಗಿ ಅನುವಾದವೆನ್ನುವುದು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಮಕ್ಕಿಕಾಮಕ್ಕಿ ಇಳಿಸುವುದಿಲ್ಲ; ಅದೊಂದು ಮರುಸೃಷ್ಟಿ ಅಥವಾ ಅನುಸೃಷ್ಟಿಯೇ ಆಗಿದೆ. ಸುಬ್ಬಣ್ಣನವರ ಅನುವಾದ ಕಾರ್ಯವು ಈ ಹಿನ್ನಲೆಯಲ್ಲಿಯೆ ನಡೆದಿದೆ ಎನ್ನಬಹುದು.

ತಮ್ಮ ಇಡೀ ವ್ಯಕ್ತಿತ್ವವನ್ನು ತೊಡಗಿಸಿಕೊಂಡು ಕಾರ್ಯಪ್ರವೃತ್ತರಾಗುವ ಸುಬ್ಬಣ್ಣವರು ಸಮುದಾಯದ ಒತ್ತಾಸೆಗಳಿಗೆ ತಮ್ಮನ್ನು ಅರ್ಪಿಸಿಕೊಂಡವರಾಗಿದ್ದಾರೆ. 'ಗೋಕುಲ ನಿರ್ಗಮನ' ವನ್ನು ಅದೊಂದು 'ಸಮುದಾಯ' ಅಂತಲೇ ಓದಿಕೊಳ್ಳುತ್ತಾರೆ. ಲೇಖನದ ಕೊನೆಯ ಭಾಗದಲ್ಲಿ "ಗೋಕುಲ ನಿರ್ಗಮನದಂಥ ಕೃತಿಗಳು ನನ್ನ ಊರಿಗೆ, ಕರ್ನಾಟಕದ ಸಮುದಾಯಕ್ಕೆ ಈಗ ಒಹು ಮುಖ್ಯ. ಅವು ನಮ್ಮನ್ನು ಸ್ಮೃತಿ ದೀಪ್ತಗೊಳಿಸುತ್ತವೆ, ಸಂಪನ್ನವಾಗಿಸುತ್ತವೆ. ಅದಕ್ಕಾಗಿ..."[೧] ಎನ್ನುತ್ತಾರೆ. ಒಟ್ಟಾರೆ ಸುಬ್ಬಣ್ಣನವರ ಪ್ರತಿಯೊಂದು ಸೃಜನಶೀಲ ಚಟುವಟಿಕೆಗಳ ಸ್ವರೂಪವನ್ನು ವೈಯಕ್ತಿಕ ಅಭೀಪ್ಸೆಗಿಂತ ಸಮುದಾಯದ ನೆಲೆಯಲ್ಲಿಯೆ ಗ್ರಹಿಸಿಕೊಳ್ಳಬೇಕಾಗುತ್ತದೆ. ಮ್ಯಾಗ್‌ಸೆಸೆ ಪ್ರಶಸ್ತಿಯು ವೈಯಕ್ತಿಕವಾಗಿ ಸಂದುದ್ದಲ್ಲ; ಅದರ

---

[೧] ಕೆ.ವಿ. ಸುಬ್ಬಣ್ಣ-ಲೇಖನ ಸಂಕಲನ ೧೯೫೪-೨೦೦೪; ಅರೆಶತಮಾನದ ಅಲೆಬರಹಗಳು; ಸಂಪಾದಕ: ಟಿ.ಪಿ. ಅಶೋಕ; ಅಕ್ಷರ ಪ್ರಕಾಶನ; ಸಾಗರ, ೨೦೦೪, ಪು.೩೪.

ಸುತ್ತ ನೀನಾಸಂ, ಅಕ್ಷರ ಪ್ರಕಾಶನ ಸಂಸ್ಥೆಗಳು, ಹೆಗ್ಗೋಡು ಮತ್ತು ಕರ್ನಾಟಕ ಪ್ರದೇಶ ಸುತ್ತಿಕೊಂಡಿವೆ ಎಂಬ ಮಾತುಗಳನ್ನು ಸುಬ್ಬಣ್ಣನವರು ಆಡುತ್ತಾರೆ. ಅಂದರೆ ಅವರ ಸೃಜನಶೀಲ ಚಟುವಟಿಕೆಗಳ ಹಿಂದೆ ಸಮುದಾಯದ ಕಾಳಜಿಗಳನ್ನು ಅವಶ್ಯಕವಾಗಿ ಗಮನಿಸಬೇಕಾಗುತ್ತದೆ.

ವಿಮರ್ಶಕರಾದ ಡಾ. ಸಿ. ಮುರಾರಿ ಬಲ್ಲಾಳರು ಸುಬ್ಬಣ್ಣನವರ ಅನುವಾದದ ಬಗೆಗೆ ಈ ರೀತಿ ಅಭಿಪ್ರಾಯಪಡುತ್ತಾರೆ:

"ಈ ನಾಟಕಗಳ ಆಯ್ಕೆ ಎಂಬುದು ಎರಡು ಕಾಲಘಟ್ಟಗಳ ಸಂಸ್ಕೃತಿಗಳ ಮುಖಾಮುಖಿ ಆಗಿಬಿಡುತ್ತದೆ. ಹಾಗಾಗಿ ಅವರಿಗೆ ಭಾಷಾಂತರವೂ ಸಂಸ್ಕೃತಿಯ ಮುಖಾಮುಖಿ ಆಗಿಬಿಡುತ್ತದೆ. ಭಗವದಜ್ಜುಕೀಯ ನಾಟಕ ಹಿಂದೂ-ಬೌದ್ಧ ದರ್ಶನಗಳ ಮುಖಾಮುಖಿಯಾಗಿ ಬಿಡುತ್ತದೆ. ಕಾಳಿದಾಸನ ಅಭಿಜ್ಞಾನ ಶಾಕುಂತಲಾ, ಸುಬ್ಬಣ್ಣನ ಲೋಕ ಶಾಕುಂತಲಾ ಆದಾಗ, ಅಥವಾ ಭಾಸ ನಾಟಕಗಳು ಸುಬ್ಬಣ್ಣನ ನಾಟಕಗಳಾದಾಗ ಅವು ಭಾಸ-ಕಾಳಿದಾಸರ ಮರುಹುಡುಕಾಟವಾಗಿ ಬಿಡುತ್ತವೆ. ಸುಬ್ಬಣ್ಣ ಅದಕ್ಕೆ ಅದ್ಭುತವಾದ ವ್ಯಾಖ್ಯೆ (New reading) ಕೊಟ್ಟಿದ್ದಾರೆ. ಹಾಗೂ ೧೯ನೇಯ ಶತಮಾನದಲ್ಲಿ ವಿಲ್ಲಿಯಮ್ ಜೇಮ್ಸ್ ನಂತಹ ವಸಾಹತುಶಾಹಿ ವಿದ್ವಾಂಸರು ಮಾಡಿದ ಅನುವಾದಕ್ಕಿಂತ ಸುಬ್ಬಣ್ಣನ ಅನುವಾದಗಳು ಸಂಪೂರ್ಣ ಭಿನ್ನವಾಗಿವೆ."[೨]

ಮುರಾರಿ ಬಲ್ಲಾಳರು ಹೇಳುವಂತೆ, ಸುಬ್ಬಣ್ಣನವರು ಸಿದ್ಧವಸ್ತುಗಳನ್ನಾಗಿ ಸ್ವೀಕರಿಸದೆ ಸಾಂಸ್ಕೃತಿಕ ಅನ್ವೇಷಣೆಯಲ್ಲಿ ತೊಡಗುತ್ತಾರೆ.

ಸುಬ್ಬಣ್ಣನವರಿಗೆ ಭಾರತೀಯ ನಾಟ್ಯಶಾಸ್ತ್ರದಲ್ಲಿ ಅತ್ಯಂತ ಆಸಕ್ತಿ ಇರುವಂತೆ ಕಾಣುತ್ತದೆ. ಭರತನ 'ನಾಟ್ಯಶಾಸ್ತ್ರ'ವು ಭಾರತೀಯ ನಾಟ್ಯ ಲಕ್ಷಣವನ್ನು ಕುರಿತ ಗ್ರಂಥವಾಗಿದೆ. ನಂತರ ಹತ್ತನೆಯ ಶತಮಾನದಲ್ಲಿ ಧನಂಜಯನು 'ದಶರೂಪಕ'ವನ್ನು ಬರೆದನು. ಸುಬ್ಬಣ್ಣನವರು ೧೯೫೮ರಲ್ಲಿ 'ದಶರೂಪಕ'ವನ್ನು ಕನ್ನಡಕ್ಕೆ ತಂದು ಮಹತ್ವದ ಕೆಲಸ ಮಾಡಿದರು. ಸುಬ್ಬಣ್ಣನವರಿಗಿಂತ ಮೊದಲು ಪಾಶ್ಚಾತ್ಯ ವಿದ್ವಾಂಸರಾದ ಫಿಟ್ಸಡ್ ವರ್ಡ್ ಹಾಲ್‌ರವರು ದಶರೂಪಕವನ್ನು ೧೮೬೫ ರಲ್ಲಿ ಸಂಪಾದಿಸಿ ಪ್ರಕಟಿಸಿದ್ದರು. ನಂತರ ಇದನ್ನು ಜೀವನಂದ ವಿದ್ಯಾಸಾಗರ್ ಮತ್ತು ಕಾಶೀನಾಥ ಪಾಂಡುರಂಗ ಪರಬ್ ಎಂಬುವವರು ೧೮೯೭ರಲ್ಲಿ ಮರು ಸಂಪಾದನೆ ಮಾಡಿದರು. ಮುಂದೆ 'ದಶರೂಪಕ'ದ ಆಂಗ್ಲಾನುವಾದವನ್ನು ಡಾ. ಜಾರ್ಜ್ ಸಿಬುಹ್ಯಾಸ್‌ರವರು ೧೯೧೨ ರಲ್ಲಿ ಪ್ರಕಟಿಸಿದರು. ತದನಂತರ ೧೯೫೫ ರಲ್ಲಿ ಡಾ. ಭೋಲಾ ಶಂಕರ ವ್ಯಾಸರವರು 'ದಶರೂಪಕ'ದ ಅನುವಾದವನ್ನು ಹಿಂದಿಯಲ್ಲಿ ತಂದರು. ಕೊನೆಗೆ ಸುಬ್ಬಣ್ಣನವರು ಈ ಎಲ್ಲ ಕೃತಿಗಳನ್ನು ಇಟ್ಟುಕೊಂಡು 'ದಶರೂಪಕ'ವನ್ನು ಕನ್ನಡಕ್ಕೆ ತಂದರು.

ಸುಬ್ಬಣ್ಣನವರು 'ದಶರೂಪಕ'ವನ್ನು ಕನ್ನಡಕ್ಕೆ ತಂದದ್ದು, ತಮ್ಮ ವೈಯಕ್ತಿಕ ವಿದ್ವತ್ತಿಗಾಗಲಿ ಅಥವಾ ಪಾಂಡಿತ್ಯ ಪ್ರದರ್ಶನಕ್ಕಾಗಲಿಯಲ್ಲ ಎಂಬುದನ್ನು ಗಮನಿಸಿದರೆ ಅವರ ಅನುವಾದ ಗ್ರಹಿಕೆಗಳು ನಮಗೆ ಅರ್ಥವಾಗ ತೊಡಗುತ್ತವೆ. ರಂಗಭೂಮಿ ಆದರ ಸಂಘಟನೆ ಮತ್ತು ನಾಟಕಗಳಲ್ಲಿ ತಮ್ಮನ್ನು ಸಕ್ರಿಯವಾಗಿ

---

೨ ರಂಗಧಾಮ; ಶ್ರೀ ಕೆ.ವಿ. ಸುಬ್ಬಣ್ಣ ಅಭಿನಂದನ ಗ್ರಂಥ; ಸಂಪಾದಕ: ಟಿ. ಮಹಾಬಲೇಶ್ವರ ಭಟ್ಟ; ಸಪ್ನ ಬುಕ್‌ಹೌಸ್; ಬೆಂಗಳೂರು; ೨೦೦೫; ಪು.೭೮.

ತೊಡಗಿಸಿಕೊಂಡಿದ್ದರಿಂದ, ಇಂತಹ ಒಂದು ಕೃತಿಯನ್ನು ಕನ್ನಡಕ್ಕೆ ತರುವುದು ಅಗತ್ಯವಾಗಿತ್ತೆಂದು ತೋರುತ್ತದೆ. ರಂಗ ತರಬೇತಿಯ ಮೂಲಕ ನೂರಾರು ಕಲಾವಿದರನ್ನು ಹುಟ್ಟುಹಾಕಬೇಕಾದ ಮಹತ್ತರವಾದ ಗುರುತರ ಜವಾಬ್ದಾರಿಯು ಸುಬ್ಬಣ್ಣನವರ ಮೇಲಿತ್ತು. ನಾಟ್ಯದ ಬಗೆಗಿನ ಸ್ವರೂಪ, ನಾಯಕ-ನಾಯಕಿಯರ ಅಭಿನಯದಲ್ಲಿರಬೇಕಾದ ಗುಣ-ಲಕ್ಷಣಗಳು ಮತ್ತು 'ರಸ'ಕ್ಕೆ ಸಂಬಂಧಿಸಿದ ವಿಚಾರಗಳು-ಹೀಗೆ ಒಟ್ಟು ಭಾರತೀಯ 'ನಾಟ್ಯಶಾಸ್ತ್ರ'ದ ಪರಂಪರೆಯನ್ನು ಶಾಸ್ತ್ರೀಯವಾಗಿ ಕಲಿಸಬೇಕೆಂಬ ಹಂಬಲದಿಂದ 'ದಶರೂಪಕ'ವನ್ನು ಅನುವಾದ ಮಾಡಿದ್ದಾರೆ ಎನಿಸುತ್ತದೆ. ಗಿರಡ್ಡಿಯವರ ಈ ಮಾತುಗಳನ್ನು ಕೇಳಿದರೆ ಅವರ ಅನುವಾದದ ಹಿಂದಿನ ಒತ್ತಾಸೆ ಗೊತ್ತಾಗುತ್ತದೆ:

"... ಬೇಕಾದ ವಿಷಯವನ್ನು ಸುಲಭವಾಗಿ ಹುಡುಕಲು ಬರುವಂತಿದೆ. ಇದೆಲ್ಲ ಸುಬ್ಬಣ್ಣನವರು ತೋರಿಸುವ ಎಚ್ಚರ, ಅಚ್ಚುಕಟ್ಟು, ಶ್ರಮಗಳಿಗೆ ನಿದರ್ಶನ, ಶ್ಲೋಕಗಳನ್ನು ಪದ್ಯರೂಪದಲ್ಲಿಯೇ ಅನುವಾದಿಸುವ ಹಂತಕ್ಕೆ ಬೀಳದೆ ಸೌಲಭ್ಯ, ಉಪಯುಕ್ತತೆ, ಅರ್ಥಸ್ಪಷ್ಟತೆಯ ದೃಷ್ಟಿಯಿಂದ ಎಲ್ಲವನ್ನು ಗದ್ಯದಲ್ಲಿಯೇ ಅನುವಾದಿಸಿರುವುದು ಯೋಗ್ಯವೇ ಆಗಿದೆ. ಅನುವಾದ... ಸ್ಪಷ್ಟವಾಗಿ, ಸರಳವಾಗಿದೆ ಎಂದು ಧಾರಳವಾಗಿ ಹೇಳಬಹುದು"[೩] ಎನ್ನುತ್ತಾರೆ.

ಸುಬ್ಬಣ್ಣನವರು 'ದಶರೂಪಕ'ವನ್ನು ಕನ್ನಡಕ್ಕೆ ತಂದದ್ದನ್ನು ಬಹುವಾಗಿ ಮೆಚ್ಚಿಕೊಂಡಿದ್ದರು. ಅನಂತಮೂರ್ತಿಯವರು ಸಹ ಅನುವಾದದ ಕುರಿತು 'ಅವನ ವಯಸ್ಸಿಗೆ ಮೀರಿದ ಒಂದು ಪ್ರೌಢ ಕೆಲಸವಾಗಿದೆ' ಎಂದು ಮೆಚ್ಚುಗೆ ವ್ಯಕ್ತಪಡಿಸಿದರು. ಹೀಗೆ ಎಲ್ಲರೂ ಒಂದಲ್ಲ ಒಂದು ಬಗೆಯಲ್ಲಿ ಸುಬ್ಬಣ್ಣನವರ ಅನುವಾದವನ್ನು ಪ್ರಶಂಸಿದರು.

ಸುಬ್ಬಣ್ಣನವರ ಯಾವುದೇ ಸೃಜನಶೀಲ ಚಟುವಟಿಕೆಗಳ ಹಿಂದೆ ಒಂದು ಮೌಲಿಕವಾದ ಉದ್ದೇಶವಿದ್ದೇ ಇರುತ್ತದೆ. 'ರಂಗಶಿಕ್ಷಣ ಕೇಂದ್ರ'ದ ಮೂಲಕ ನೂರಾರು ಕಲಾವಿದರನ್ನು ಹುಟ್ಟು ಹಾಕುವುದು ಮಾತ್ರವಲ್ಲ; ರಂಗಭೂಮಿಯನ್ನು ಎಲ್ಲರಿಗೂ ಪರಿಚಯಿಸಿ ಆ ಮೂಲಕ ಅದನ್ನು ಎಲ್ಲ ದಿಕ್ಕುಗಳಲ್ಲೂ ಉಳಿಸಿ ಬೆಳೆಸಬೇಕೆಂಬ ತುಡಿತ ಅವರಿಗಿತ್ತು. ಕಲೆಗಳನ್ನು ಪೋಷಿಸಿ, ಬೆಳೆಸುವ ನಿಟ್ಟಿನಲ್ಲಿ ಅವರ ಅನುವಾದ ಗ್ರಹಿಕೆಗಳ ಸ್ವರೂಪವನ್ನು ಗುರುತಿಸಿಕೊಳ್ಳಬೇಕಾಗುತ್ತದೆ. ಕೊನ್ ಸ್ತಾಂತಿನ್ ಸ್ತಾನಿಸ್ಲಾವ್‌ಸ್ಕಿಯ 'An Actor Prepares' (ರಷ್ಯನ್ ಶೀರ್ಷಿಕೆ ಎಸ್. ಆ್ಯಕ್ಟರ್ಸ್ ವರ್ಕ್ ಆನ್ ಹಿಮ್‌ಸೆಲ್ಫ್) ಕೃತಿಯನ್ನು ಕನ್ನಡದಲ್ಲಿ 'ರಂಗದಲ್ಲಿ ಅಂತರಂಗ' ಎಂಬ ಶೀರ್ಷಿಕೆಯನ್ನು ತಂದರು. ರಂಗಶಿಕ್ಷಣ ವಿದ್ಯಾರ್ಥಿಗಳು ಮತ್ತು ಬೇರೆ ಬೇರೆ ಕಲೆಗಳಲ್ಲಿ ತೊಡಗಿಕೊಂಡಿರುವವರನ್ನು ಗಮನದಲ್ಲಿರಿಸಿಕೊಂಡೆ ಈ ಕೃತಿಯನ್ನು ಕನ್ನಡಕ್ಕೆ ತರಲಾಯಿತು ಎಂಬುದನ್ನು ಗಮನಿಸಬೇಕು.

ಸ್ತಾನಿಸ್ಲಾವ್‌ಸ್ಕಿಯು 'ಅಭಿನಯಶಾಸ್ತ್ರ'ದ ವಿಶ್ಲೇಷಣೆ ಮತ್ತು ನಟನು ಅಭಿನಯ ಸಮರ್ಥನೆಗಾಗಿ ತನ್ನನ್ನು ಸಜ್ಜುಗೊಳಿಸಿಕೊಳ್ಳಬೇಕಾದ 'ಮಾರ್ಗ ಅಥವಾ ಪದ್ಧತಿ'ಯನ್ನು ತಿಳಿಸಿಕೊಟ್ಟವನು ಎಂಬ ಕಾರಣಕ್ಕಾಗಿ ಸುಬ್ಬಣ್ಣನವರಿಗೆ ಪ್ರಿಯನಾಗುತ್ತಾನೆ ಮತ್ತು ಕನ್ನಡದಲ್ಲಿ ರಂಗಭೂಮಿಗೆ ಸಂಬಂಧಪಟ್ಟ ನಟ-ಸಂಪ್ರದಾಯವನ್ನು ನಿರಂತರವಾಗಿ ನಡೆಸಿಕೊಂಡು ಹೋಗಲು ಸ್ತಾನಿಸ್ಲಾವ್‌ಸ್ಕಿಯ ಈ ಕೃತಿಯು ನೆರವಾದಿತು ಎಂಬ ಮತ್ತೊಂದು

---

೩ ಗಿರಡ್ಡಿ ಗೋವಿಂದರಾಜು, ಸಮಗ್ರ ವಿಮರ್ಶೆ, ಸಪ್ನಬುಕ್ ಹೌಸ್, ಬೆಂಗಳೂರು, ೨೦೦೧, ಪು.೫೪೭.

ಕಾರಣ ಮತ್ತು ಆಶಯವು ಅವರಿಗೆ ಪ್ರಮುಖವಾಗಿದೆ. 'ಅಭಿನಯ'ಕ್ಕೆ ಸಂಬಂಧಿಸಿದಂತೆ ಶಾಸ್ತ್ರೀಯ ತಳಹದಿಯನ್ನು ರೂಪಿಸಿಕೊಡುವ 'ರಂಗದಲ್ಲಿ ಅಂತರಂಗ' ಕೃತಿಯು ಸುಬ್ಬಣ್ಣನವರ ಅಂತರಂಗದ ದೊಡ್ಡ ಅಭೀಪ್ಸೆಯೆ ಆಗಿದೆ.

'ನನ್ನ ಅನುಭವಕ್ಕೆ ದಕ್ಕಿದ ರಂಗಕಲ್ಪನೆ'ಯಲ್ಲಿ ಸುಬ್ಬಣ್ಣನವರು "... ನಾನು ಭಾರತೀಯ ಸೋಶಲಿಸಮ್‌ನಲ್ಲಿ ಗಾಢ ನಂಬಿಕೆಯಿದ್ದವನು. ನಮ್ಮ ಜತೆಗಾರರಲ್ಲಿ, ಬೇರೆ ಬೇರೆ ಕಾರಣಗಳಿಗಾಗಿ ಬೇರೆ ಬೇರೆ ಪಕ್ಷ ಸಿದ್ಧಾಂತಗಳಿಗೆ ಅಂಟಿಕೊಂಡವರಿದ್ದರು. ಈ ಕಾರಣ ನಾವು ಯಾವುದೇ ಪಕ್ಷ ಅಥವಾ ಸಿದ್ಧಾಂತದ ಜೊತೆಗೆ ಸಂಸ್ಥೆಯನ್ನು ನೇರವಾಗಿ ಸ್ಪಷ್ಟವಾಗಿ ಸಮೀಕರಿಸುವುದು ಅಸಾಧ್ಯವಾಗಿತ್ತು"[೪] ಎಂದು ಹೇಳುತ್ತಾರೆ. ಅವರು ಸೋಶಲಿಸಮ್‌ಗೆ ಬದ್ಧರಾದವರು. ಬಹುಶಃ ಬ್ರೆಕ್ಟ್‌ನನ್ನು ಮೆಚ್ಚಿಕೊಂಡು ಕನ್ನಡಕ್ಕೆ ಆತನನ್ನು ತರುವಲ್ಲಿ ಇದೂ ಒಂದು ಕಾರಣವಿರಬಹುದು.

ಒಂದು ಸಮುದಾಯದಲ್ಲಿ ಪ್ರತಿನಿತ್ಯ ಅವರೊಟ್ಟಿಗೆ ಬದುಕುತ್ತಿರುವಾಗ ಅಲ್ಲಿನ ಎಲ್ಲರ ಆಯ್ಕೆಗಳು, ಅಭಿಪ್ರಾಯಗಳನ್ನು ಗಣನೆಗೆ ತಂದು ಕೊಳ್ಳಬೇಕಾಗುತ್ತದೆ. ಅದೂ ಅಲ್ಲದೆ ಸಮುದಾಯ ಎಂದಾಗ ಅಲ್ಲಿ ಭಿನ್ನಾಭಿಪ್ರಾಯಗಳೂ ಇದ್ದೇ ಇರುತ್ತವೆ. ಭಿನ್ನ-ಭಿನ್ನವಾದ ಜಾತಿವರ್ಗಗಳೂ, ಭಿನ್ನ-ಭಿನ್ನವಾದ ಆಸಕ್ತಿ ಅಭಿರುಚಿಗಳೂ ಇರುವ ಜನರು ಇರುತ್ತಾರೆ. ಹೀಗಿರುವಾಗ ಪರಸ್ಪರರಲ್ಲಿ ಮುಕ್ತವಾಗಿ ಮಾತನಾಡಿಕೊಳ್ಳುತ್ತಾ, ಚರ್ಚಿಸಿಕೊಳ್ಳುತ್ತಾ ಅರ್ಥಮಾಡಿಕೊಳ್ಳಲು ಯತ್ನಿಸಬೇಕಾಗುತ್ತದೆ. ಸಣ್ಣ...ಪುಟ್ಟ ಸಂಘರ್ಷಗಳಿದ್ದಾಗ್ಯೂ ಕೂಡಿಕೊಂಡು ಕ್ರಿಯಾಶೀಲತೆಯಲ್ಲಿ ತೊಡಗಿಕೊಳ್ಳಬೇಕಾಗುತ್ತದೆ.

ಸುಬ್ಬಣ್ಣನವರು ಸೋಶಲಿಸಮ್‌ನಲ್ಲಿ ನಂಬಿಕೆ ಇಟ್ಟುಕೊಂಡಿದ್ದನ್ನು ವಿವರಿಸಲು ಈ ಮೇಲಿನ ಮಾತುಗಳನ್ನು ಸಮುದಾಯಕ್ಕೆ ಸಂಬಂಧಿಸಿದಂತೆ ಹೇಳಬೇಕಾಯಿತು.

ಬ್ರೆಕ್ಟ್ ಮೂಲತಃ ಸಮಾಜವಾದದಲ್ಲಿ ನಂಬಿಕೆಯಿಟ್ಟು ಕೊಂಡಿದ್ದನು. ಜರ್ಮನಿಯು ಹಿಟ್ಲರನ ನಾಯಕತ್ವದಲ್ಲಿ ನಾಝಿಗಳಿಂದ ಹಿಂಸೆಗೆ ಒಳಪಡುತ್ತಿದ್ದಂತಹ ಸಂದರ್ಭದಲ್ಲಿ ಸಮಾಜವಾದವು ಬ್ರೆಕ್ಟ್‌ನನ್ನು ಆಕರ್ಷಿಸಿತು. ಬ್ರೆಕ್ಟ್ ಸಮಾಜವಾದವೊಂದೆ ಜರ್ಮನಿಯ ರೋಗಗಳಿಗೆ ಮದ್ದು ಎಂಬುದನ್ನು ಕಂಡುಕೊಂಡ. ಆ ಬಳಕವೆ ಆತ ಮ್ಯಾಕ್ಸಿಂ ಗೋರ್ಕಿಯ 'ಮದರ್' ಕಾದಂಬರಿಯನ್ನು ಅಳವಡಿಸಿಕೊಂಡು. ರಷ್ಯಾದ ಮಹಾಕ್ರಾಂತಿಯನ್ನಾಧರಿಸಿದ ಒಂದು ನಾಟಕವನ್ನು ರಚಿಸಿದನು (ಸುಬ್ಬಣ್ಣನವರು ಗೋರ್ಕಿಯ 'ಕಥೆ'ಗಳನ್ನು ಕನ್ನಡಿಕ್ಕೆ ತಂದಿದ್ದಾರೆ ಎಂಬುದನ್ನು ಇಲ್ಲಿ ನೆನೆಯಬೇಕು). ಸಮಾಜವಾದದ ಹಿನ್ನೆಲೆಯುಳ್ಳ ಈ 'ನಾಟಕ'ದ ಪ್ರದರ್ಶನವನ್ನು ಜರ್ಮನಿಯ ಸರ್ವಾಧಿಕಾರ ಆಡಳಿತವು ನಿಷೇಧಿಸಿತು. ಮತ್ತು ನಾಝಿಗಳು ಬ್ರೆಕ್ಟ್‌ನ ಕೃತಿಗಳನ್ನು ಸುಟ್ಟು ಆತನ ಜರ್ಮನ್ ಪೌರತ್ವವನ್ನು ರದ್ದು ಪಡಿಸಲಾಯಿತು. ಕೊನೆಗೆ ಬ್ರೆಕ್ಟ್ ವಿಧಿಯಿಲ್ಲದೆ ತನ್ನ ಜೀವವುಳಿಸಿಕೊಳ್ಳಲು ದೇಶಾಂತರ ಹೋಗಲೇಬೇಕಾದ ಅನಿವಾರ್ಯ ಪರಿಸ್ಥಿತಿ ಎದುರಾಯಿತು.,

ಸುಬ್ಬಣ್ಣನವರು ಯಾವುದೇ ಒಂದು ಕಾರ್ಯ ಅಥವಾ ಸೃಜನಶೀಲ ಚಟುವಟಿಕೆಗಳನ್ನು ಕೈಗೊಂಡಿದರೂ, ಅವುಗಳ ಅಸ್ತಿವಾರ ಯಾವುದರ ಮೇಲೆ ರೂಪುಗೊಂಡಿರುತ್ತದೆ ಎಂಬುದನ್ನು ಅರಿಯಲು,

---

೪ ಕೆ.ವಿ. ಸುಬ್ಬಣ್ಣ, ಲೇಖನ ಸಂಕಲನ ೧೯೫೪-೨೦೦೪; ಅರೆಶತಮಾನದ ಅಲೆಬರಹಗಳು, ಸಂಪಾದಕ: ಟಿ.ಪಿ. ಅಶೋಕ, ಅಕ್ಷರ ಪ್ರಕಾಶನ, ಸಾಗರ, ೨೦೦೪, ಪು.೬೫೫.

ಅವರು ಆಯ್ಕೆ ಮಾಡಿಕೊಂಡ ವ್ಯಕ್ತಿಗಳು, ಕೃತಿಗಳನ್ನು ಗಮನಿಸುವುದು ಅವಶ್ಯಕವಾಗುತ್ತದೆ. ಏಕೆಂದರೆ ಮೊದಲೆ ಹೇಳಿದಂತೆ ಸುಬ್ಬಣ್ಣನವರು ಯಾವುದೇ ಸೃಜನಶೀಲ ಚಟುವಟಿಕೆಗಳನ್ನು ಪಾಂಡಿತ್ಯ ಪ್ರದರ್ಶನಕ್ಕಾಗಲಿ, ಮೆಚ್ಚುಗೆಗಾಗಲಿ ಅಥವಾ ಪ್ರಶಸ್ತಿಗಾಗಲಿ ಮಾಡದೆ ಸಮುದಾಯದ ತುರ್ತಿನಿಂದ ಮಾಡುತ್ತಾರೆ.

ಕವಿ, ನಾಟಕಕಾರ, ನಿರ್ದೇಶಕ ಮತ್ತು ವಿಚಾರವಾದಿಯಾದ ಬ್ರೆಕ್ಟ್‌ನು ನಿರಂತರವಾಗಿ ತನ್ನನ್ನು ಜೀವಂತವಾಗಿ ರಂಗಭೂಮಿಯಲ್ಲಿ ತೊಡಗಿಸಿಕೊಂಡಿದ್ದನು. 'ತ್ರೀ ಪೆನ್ನಿ ಅಪೆರ' ಯೂರೋಪಿನಾದ್ಯಂತ ಪ್ರಸಿದ್ಧವಾಗಿ ಆತನಿಗೆ ನಾಟಕಕಾರನೆಂಬ ಬಿರುದನ್ನು ತಂದುಕೊಟ್ಟಿತು. ಬ್ರೆಕ್ಟ್‌ನ 'ತಾಯಿ', 'ಸೆಜುವಾನ್ ನಗರದ ಸಾಮೀ' ಮತ್ತು ಮೂರು ಕಾಸಿನ ಸಂಗೀತ ನಾಟಕ'ಗಳನ್ನು ಸುಬ್ಬಣ್ಣನವರು ಕನ್ನಡಕ್ಕೆ ತಂದರು. ಸುಬ್ಬಣ್ಣನವರು 'ಸೆಜುವಾನ್ ನಗರದ ಸಾಧ್ವಿ'ಯ ಮುನ್ನುಡಿ (ಮೊದಲ ಮಾತು)ಯಲ್ಲಿ ವಿಶ್ವನಾಟಕಗಳ ಇತಿಹಾಸವು ಮಾನವ ಕುಲದ ಸಾಂಸ್ಕೃತಿಕ ಇತಿಹಾಸದ ಮೂರು ಘಟ್ಟಗಳನ್ನು ತಿಳಿಸುತ್ತವೆ ಎಂದು ಹೇಳುತ್ತಾ. "... ತರತಮ ನಿಶ್ಚಿತಿಗಳನ್ನು ಶೋಷಣೆ ಶರಣಾಗತಿಗಳನ್ನು ದಿಕ್ಕರಿಸಿ ಸ್ವತಂತ್ರ–ಸಮಾನ ವ್ಯಕ್ತಿಗಳ ಮಾನವೈಕ ಸಂಬಂಧದ ಸಮಾಜ ಸಂಸ್ಕೃತಿ ನಿರ್ಮಾಣವಾಗಬೇಕೆಂದು ಮನುಷ್ಯಕುಲ ಆವರಿಸಿರುವ ತೊಡಗಿರುವ ಸಂದರ್ಭ ನಮ್ಮದು. ಪ್ರಾಯಶಃ ಮುಂದೆ ಬರಲಿರುವ ಈ ಮೂರನೇ ಘಟ್ಟದ ಅರಿವನ್ನು ತೆರೆದು ಕಾಣಿಸಿದ ಮಹತ್ವದ ನಾಟಕಕಾರ, ಬ್ರೆಕ್ಟ್"[೫] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಬ್ರೆಕ್ಟ್‌ನು ತನ್ನ 'ಕಕೇಸಿಯನ್ ಚಾಕ್‌ಸರ್ಕಲ್'ನ ನಾಟಕದಲ್ಲಿ ರಕ್ತ ಸಂಬಂಧಕ್ಕಿಂತಲೂ, ಸಮಾಜಸಂಬಂಧವೇ ಅತ್ಯಂತ ಗಾಢವಾದದ್ದು ಎಂಬುದನ್ನು ಕಾಣಿಸಿದ್ದರಿಂದ ಸುಬ್ಬಣ್ಣನವರಿಗೆ ಆತ ಮಹತ್ತ್ವದನಾಗಿ ಕಾಣುತ್ತಾನೆ.

ಸುಬ್ಬಣ್ಣನವರು ವಾಸ್ತವದ ಸಮಾಜ ಸಂಸ್ಕೃತಿಯನ್ನು ಇತಿಹಾಸದ ಹಿನ್ನಲೆಯಲ್ಲಿ ಕಟ್ಟಿಕೊಳ್ಳಲು ಯತ್ನಿಸುತ್ತಾರೆ. ಇತಿಹಾಸದ ಸಂಗತಿಗಳನ್ನು ಗ್ರಹಿಸಿಕೊಳ್ಳುತ್ತಲೇ ಪ್ರಸ್ತುತದ ಬಗ್ಗೆ ಅತ್ಯಂತ ಜಾಗೃತವಾಗಿ ವರ್ತಿಸಬೇಕಾಗುತ್ತದೆ. ಇತಿಹಾಸ ಮತ್ತು ವರ್ತಮಾನ ಎರಡನ್ನು ವಿವಕ್ತವಾಗಿ ನೋಡದೆ ಸಮಗ್ರವಾಗಿ ಗ್ರಹಿಸಿಕೊಂಡು ವಸ್ತು ನಿಷ್ಠೆಯನ್ನು ಸಾಧಿಸಬೇಕಾಗುತ್ತದೆ. ಅಂದರೆ ಗತಕಾಲವನ್ನು ಪರೀಕ್ಷಿಸಿ ಕೊಳ್ಳುತ್ತಲೆ, ವಾಸ್ತವದ ಸ್ಥಿತ್ಯಂತರಗಳನ್ನು ಸಂಗೋಪಿಸಿಕೊಳ್ಳಬೇಕಾಗುತ್ತದೆ ಎಂಬ ವಿಚಾರ ಸುಬ್ಬಣ್ಣನವರದು. ಎಸ್. ಚಂದ್ರಶೇಖರವರ 'ಅಂಬೇಡ್ಕರ್ ಮತ್ತು ಗಾಂಧಿ' ಪುಸ್ತಕಕ್ಕೆ ಬರೆದ ಮುನ್ನುಡಿಯಲ್ಲಿ "ಬ್ರೆಕ್ಟ್ ಹೇಳುತ್ತಾನಲ್ಲ 'ನಾಟಕವೆನ್ನುವುದು ಪ್ರೇಕ್ಷಕನಿಗೆ ಅದೊಂದು ವಿಶಿಷ್ಟ ಕಾಲ ಸನ್ನಿವೇಶಗಳ ಇತಿಹಾಸವಾಗಿ ಕಾಣಬೇಕು. ತನ್ನ ಕಾಲವು ಬೇರೆಯೇ ಎನ್ನಿಸಬೇಕು. ತನ್ನ ಕಾಲವನ್ನು ಆ ಹಿಂದಿನ ಕಾಲಕ್ಕಿಂತ ಭಿನ್ನವಾಗಿ ಉತ್ತಮವಾಗಿ ಮಾರ್ಪಡಿಸಿಕೊಳ್ಳುತ್ತೇನೆ ಎಂಬ ಫಲ ಹುಟ್ಟಿಸಬೇಕು' ಎಂದು ಹಾಗೆ, ಇತಿಹಾಸ ಪರಿಶೀಲನೆಯು ಉತ್ತಮವಾಗಿ ತಿದ್ದಿಕೊಳ್ಳುವ ಬದಲಿಸಿಕೊಳ್ಳುವ ಛಲ ಹುಟ್ಟಿಸಬೇಕು"[೬] ಎನ್ನುತ್ತಾರೆ.

---

೫ ಬಟೋರ್ಲ್ಟ್ ಬ್ರೆಟ್ಟ್, ಸೆಜುವಾನ್‌ನಗರದ ಸಾಧ್ವಿ, ಅನುವಾದಕರು: ಕೆ.ವಿ. ಸುಬ್ಬಣ್ಣ, ಅಕ್ಷರ ಪ್ರಕಾಶನ, ಸಾಗರ, ೧೯೮೭, ಪು.೧.

೬ ಕೆ.ವಿ. ಸುಬ್ಬಣ್ಣ, ಲೇಖನ ಸಂಕಲನ ೧೯೫೪–೨೦೦೪, ಅರೆ ಶತಮಾನದ ಅಲೆಬರಹಗಳು, ಸಂಪಾದಕ: ಟಿ.ಪಿ. ಅಶೋಕ, ಅಕ್ಷರ ಪ್ರಕಾಶನ, ಸಾಗರ, ೨೦೦೪, ಪು.೮೨೨.

ಮೇಲಿನ ಅವರ ಮಾತುಗಳಲ್ಲಿ ಅನುವಾದದ ಕುರಿತು ಅವರ ಒಳನೋಟಗಳನ್ನು ಗುರುತಿಸಿಕೊಳ್ಳಬಹುದು. ಒಟ್ಟಾರೆ ಬ್ರೆಕ್ಟ್‌ನು ವಿಶ್ವದ ಮಹಾನಾಟಕಕಾರ ಎಂಬುದಕ್ಕಿಂತ ಹೆಚ್ಚಾಗಿ ಆತ ವಿಶ್ವಕ್ಕೆ ಹೊಸ ಯುಗದ ಹರಿಕಾರ ಎಂದು ಹೇಳಿಕೊಳ್ಳುವುದರಲ್ಲಿ ಸುಬ್ಬಣ್ಣನವರಿಗೆ ಸಖ್ಯವಿದೆ. ಬ್ರೆಕ್ಟ್ ನಾಟಕಗಳ ಅನುವಾದವಲ್ಲದೆ, ಗೋರ್ಕಿ ಕತೆಗಳು, ಲೋಹಿಯಾರ ಬರಹಗಳ ಅನುವಾದ ಹಾಗೂ ಝೆನ್‌ನನ್ನು ಕನ್ನಡಕ್ಕೆ ತಂದದ್ದು – ಹೀಗೆ ಎಲ್ಲದರ ಹಿಂದೆಯೂ ಸುಬ್ಬಣ್ಣನವರ ಅಭಿರುಚಿ, ಆಸಕ್ತಿಗಳು ಯಾವ ಬಗೆಯವು ಎಂಬುದು ಗೊತ್ತಾಗುತ್ತದೆ. ಈ ಹಿನ್ನೆಲೆಯಲ್ಲಿ ಝೆನ್‌ನ ಅನುವಾದವನ್ನು ನೋಡಬಹುದು.

ಹೊಸ ಹೊಸ ಅನ್ವೇಷಣೆಗಳನ್ನು ಮತ್ತು ಹೊಸ ಹೊಸ ಸತ್ಯ ದರ್ಶನಗಳನ್ನು ಕಾಣಿಸುವ ಕೃತಿಗಳನ್ನು ಬೇರೆಯವರಿಗೂ ತಿಳಿಸಬೇಕೆಂಬ ಕಾತರ, ಹಂಬಲ ಸುಬ್ಬಣ್ಣನವರಿಗೆ ಇತ್ತೆನಿಸುತ್ತದೆ. ಝೆನ್ ಎನ್ನುವುದು ವ್ಯಕ್ತಿಯಲ್ಲಿ ಸ್ವ–ಪ್ರಜ್ಞೆಯನ್ನು ದಿಢೀರನೆ ಅಮೂಲಾಗ್ರವಾಗಿ ಹೊಳೆಯಿಸಿ (ಜ್ಞಾನೋದಯ) ಕೊಡುವಂಥದ್ದು. ಬದುಕಿನ ಯಾವುದೇ ಚಿಂತನೆ, ತರ್ಕ ಮತ್ತು ಗ್ರಹಿಕೆಗಳಲ್ಲಿ ಹೂತು ಹೋಗದೆ, ಅವುಗಳಿಂದ ಸಿಡಿದು ಹೊರ ಬರುವುದರ ಮೂಲಕ ಬದುಕಿನ ಸತ್ಯಕ್ಕೆ ಎದುರಾಗುವಂಥದ್ದಾಗಿದೆ. ಒಬ್ಬ ಝೆನ್ ಗುರುವು ಎಲ್ಲರನ್ನುದ್ದೇಶಿಸಿ ಈ ರೀತಿ ಹೇಳುತ್ತಾನೆ :

'ಕನ್ನಡಿಯನ್ನು ನೀವು ಕಂಡಿರುವಿರಿ, ಅಲ್ಲವೇ/ ಅದರಲ್ಲಿ ನಿಮ್ಮ ಮುಖ ನೋಡಿಕೊಂಡಿರಲಿಕ್ಕು ಸಾಕು.

ಆದರೆ ನಿಮಗೆ ಗೊತ್ತೆ? ಕನ್ನಡಿ ಏನನ್ನು ಸ್ವೀಕರಿಸುವುದಿಲ್ಲ. ಹಾಗೆಂದು ಏನನ್ನು ತಿರಸ್ಕರಿಸುವುದೂ ಇಲ್ಲ. ಅದು ತನಗೆದುರಾದುದೆಲ್ಲವನ್ನು ಗ್ರಹಿಸುತ್ತದೆ. ಆದರೆ ಯಾವುದನ್ನು ಸಂಗ್ರಹಿಸಿಟ್ಟು ಕೊಳ್ಳುವುದಿಲ್ಲ.

ಮನುಷ್ಯ, ಮನಸ್ಸನ್ನು ಹಾಗೆ ಇಟ್ಟುಕೊಳ್ಳಬೇಕು."[೭]

'ಝೆನ್ ಬಚ್ಚಿಡುವಂತದಲ್ಲ. ಝೆನ್ ಮುಚ್ಚಿಡುವಂಥದಲ್ಲ' ಎಂಬ ಮಾತನ್ನು ಸುಬ್ಬಣ್ಣನವರು ಹೇಳುತ್ತಾರೆ. ಮೇಲೆ ಉದಾಹರಿಸಿರುವ ಕಥೆಯು ಸುಬ್ಬಣ್ಣನವರ ಮಾತನ್ನು ಸಮರ್ಥವಾಗಿ ಧ್ವನಿಸುತ್ತದೆ. ಝೆನ್ ಎಂದರೆ ಬದುಕು ಎಂದು ಮತ್ತು ಬದುಕನ್ನು ಅರಿತುಕೊಳ್ಳಬೇಕು ಎಂದು ಹೇಳಲಾಗುತ್ತದೆ.

ಜ್ಞಾನೋದಯ ಎನ್ನುವುದು ಯಾರಿಗೋ ಒಬ್ಬರಿಗೆ ಉಂಟಾಗುವಂಥದ್ದಲ್ಲ; ಅದು ಪ್ರತಿಯೊಬ್ಬ ವ್ಯಕ್ತಿಗೂ ಸ್ವ–ಪ್ರಜ್ಞೆಯ ಮೂಲಕ ಉಂಟಾಗುವಂಥದ್ದು, ಝೆನ್ ಪ್ರತಿಪಾದಿಸುವ ಈ ಅಂಶವೆ ಸುಬ್ಬಣ್ಣನವರಿಗೆ ಆಪ್ತವಾಗಿ ಕಂಡಿರಬೇಕು. ಇದರ ಜತೆಗೆ ಇನ್ನೊಂದು ಪ್ರಮುಖ ಕಾರಣವನ್ನು ಗುರುತಿಸಬಹುದು. ಬದುಕನ್ನು ಕೃತಿಯನ್ನಾಗಿಸುವ 'ಝೆನ್' ಸುಬ್ಬಣ್ಣನವರನ್ನು ಪ್ರಭಾವಗೊಳಿಸಿದೆ. ಅವರೆ ಹೇಳುವಂತೆ, 'ಝೆನ್ ಜೀವಿಸು ಎನ್ನುತ್ತದೆ; ಹೇಗೆ ಜೀವಿಸಬೇಕು ಎಂದು ವಿಧಿ–ನಿಷೇಧ ಹೇಳುವುದಿಲ್ಲ. 'ಇದು ಬದುಕಿನ ಅರಿವು' ಎಂದು ಮಥಿತವನ್ನು ಕೈಗೆತ್ತಿಕೊಡುವುದಿಲ್ಲ. ಬದುಕನ್ನು ಅರಿ ಎನ್ನುತ್ತದೆ." ಉದಾಹರಣೆಯಾಗಿ ಕೆಲವು ಝೆನ್ ಕತೆಗಳನ್ನು ಕೊಡಬಹುದು:

---

೭ ಜಿ.ಎನ್. ರಂಗನಾಥರಾವ್, ಝೆನ್ ಕಥೆಗಳು ಕವಿತೆಗಳು ಒಗಟುಗಳು, ಅಂಕಿತ ಪುಸ್ತಕ, ೨೦೦೪, ಪು.೧೧೦.

ಬುದ್ಧನ ಬಗೆಗೆ ಒಬ್ಬೊಬ್ಬ ಗುರುವೂ ಮತ್ತು ಒಬ್ಬೊಬ್ಬ ಭಿಕ್ಷುವು ಒಂದೊಂದು ರೀತಿಯಲ್ಲಿ ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. ಭಿನ್ನ-ಭಿನ್ನವಾಗಿ ಬೇರೆ ಬೇರೆ ಗುರುಗಳು ಹೀಗೆ ಹೇಳಿದ್ದಾರೆ :

(೧) "ಬುದ್ಧ ಎಂದರೆ ಬಂಗಾರದ ಎಲೆ ದಾಂಗುಡಿಸಿದ ಕುಂಕುಮ ಭೂಮಿ.

ಬುದ್ಧ ಎಂದರೆ, ಬೌದ್ಧ ವಿಹಾರದಲ್ಲಿರುವ ಒಂದು ವಸ್ತು ವಿಶೇಷ.

ಬುದ್ಧ ಎಂದರೆ, ಆದಲ್ಲ.

ಬುದ್ಧ ಎಂದರೆ ಸಾಗರದ ಅಲೆಗಳ ಮೇಲೆ ಸವಾರಿ ಹೊರಟ ಪರ್ವತಗಳ ಸಾಲು.

ಬುದ್ಧ ಎಂದರೆ ಯಾರು? ತಿಳಿಯಬೇಕೆ? ನೋಡಿ, ಮೂರು ಕಾಲಿನ ಕತ್ತೆಯನ್ನು

ಬುದ್ಧ ಎಂದರೆ ಒಣಗಿದ ಲದ್ದಿ.

ಬುದ್ಧ ಎಂದರೆ ಹಿತ್ತಲಲ್ಲಿರುವ ಬಿದರ ಮಳೆ.

ಬುದ್ಧ ಎಂದರೆ ಹತ್ತು ಮಣ ಸೆಣಬು.

ಬುದ್ಧ ಯಾರೆಂದು ಹೇಳುವೆ – ಆದರೆ ಮಾತು ಯಾತನೆಯ ದಿಡ್ಡಿ ಬಾಗಿಲು."[೮]

(೨) "ಡಾಯಿಜು ಎಂಬ ಜ್ಞಾನಾರ್ಥಿ ಚೀನದಲ್ಲಿ ಬಸೋ ಎಂಬ ಗುರುವನ್ನು ಭೇಟಿಯಾದ.

"ಏನು ಬೇಕು"?

– ಬಸೋ ಪ್ರಶ್ನೆ.

"ಜ್ಞಾನಭಿಕ್ಷೆ ಬೇಡಿ ಬಂದಿರುವೆ"

"ನಿನ್ನಲ್ಲಿ ನಿನ್ನದೇ ಭಂಡಾರ ಇರುವಾಗ ಹೊರಗಡೆ ಏಕೆ ಹುಡುಕುತ್ತೀಯ?"

– ಬಸೋ ಕೇಳಿದ

"ಎಲ್ಲಿದೆ ನನ್ನ ಭಂಡಾರ?"

"ಏನು ನಿನ್ನ ಭಂಡಾರ ನಿನಗೇ ತಿಳಿಯದೆ. ಅದನ್ನು ಅನ್ಯರಿಂದ ತಿಳಿಯಬೇಕೆ?"

ಆ ಕೂಡಲೇ ಕಾಯಿಜುಗೆ ಜ್ಞಾನೋದಿಯವಾಯಿತು. ಅಂದಿನಿಂದ ಅವನು ತನ್ನ ಮಿತ್ರರಿಗೂ ಇದನ್ನೇ ಹೇಳುತ್ತಿದ್ದ:

"ನಿಮ್ಮ ಭಂಡಾರವನ್ನು ತೆಗೆದು ನೋಡಿ,

ಅಲ್ಲಿರುವ ಸಂಪತ್ತನ್ನು ಬಳಸಿ"[೯]

---

೮ ಅದೇ, ಪು.೧೦೫–೧೦೬.

೯ ಅದೇ, ಪು.೫೫.

(೩) ಕಾಲಮಾನದ ಕುರಿತು ಝೆನ್ ಗುರುಗಳಾದ ಟಕು ಅನ್‌ರವರು ಒಬ್ಬ ಅಧಿಕಾರಿಗೆ ಹೇಳುವ ಈ ಕೆಳಗಿನ ಮಾತುಗಳನ್ನು ಗಮನಿಸಬೇಕು:

"ಇಲ್ಲ ಈ ದಿನ ಮತ್ತೆ ಹುಟ್ಟುವುದಿಲ್ಲ

ಅಂಗುಲಂಗುಲ ಕಾಲಮಾನವೂ ಅತ್ಯಮೂಲ್ಯ

ಇಲ್ಲ ಕಳೆದ ದಿನ ಮರಳುವುದಿಲ್ಲ

ಒಂದಂಗಲ ಕಾಲಕ್ಕಿರುವ ಕಿಮ್ಮತ್ತು

ಗೇಣುದ್ದದ ಅಮೂಲ್ಯ ಅನರ್ಘ್ಯ ರತ್ನಕ್ಕೂ ಇಲ್ಲ."[೧೦]

ಮತ್ತು

ಒಗಟು ಎಂದು ಹೇಳಲಾಗುವ :

ಒಂಟಿ ಕೈ ಚಪ್ಪಾಳೆಯ ಸದ್ದು ಹೇಗಿರುತ್ತದೆ?

ನಾಯಿಯಲ್ಲಿ ಬುದ್ಧತ್ವ ಇರುತ್ತದೆಯೇ? ಮುಂತಾದವುಗಳನ್ನು ಕಾಣಬಹುದು.

ಕಾವ್ಯ, ತತ್ತ್ವಶಾಸ್ತ್ರ, ಧರ್ಮಶಾಸ್ತ್ರ ಮತ್ತು ನೀತಿಶಾಸ್ತ್ರ ಮುಂತಾದ ಜೀವನದ ಸಕಲವನ್ನು ಒಳಗೊಂಡದ್ದೇ ಝೆನ್, ಬದುಕನ್ನು ಕಲೆ ಅಥವಾ ಕೃತಿಯನ್ನಾಗಿಸುವ ಝೆನ್ ಸುಬ್ಬಣ್ಣನವರ ಪ್ರಮುಖ ಆಸಕ್ತಿಗಳಲ್ಲೊಂದಾಗಿದೆ. ಮುರಾರಿ ಬಲ್ಲಾಳರು 'ಕೆ.ವಿ. ಸುಬ್ಬಣ್ಣ ನಾನು ಕಂಡ ಜೀವಂತ ಮನುಷ್ಯ' ಎಂಬ ಲೇಖನದಲ್ಲಿ: "ತರ್ಕವನ್ನು ಮೀರುವ ಸುಬ್ಬಣ್ಣನವರ ಆತಾರ್ಕಿಕ ಮನಸ್ಸು, ಜೀವನದ ಒಂದು ಕಾಲಘಟ್ಟದಲ್ಲಿ, ಝೆನ್ ದರ್ಶನಕ್ಕೆ ಆಕರ್ಷಿತವಾಗಿತ್ತು. ಝೆನ್ ತತ್ತ್ವದಲ್ಲಿರುವ ಹೊಳಹುಗಳ ಬಗ್ಗೆ ಒಳನೋಟ ಬೀರುವ ಸುಬ್ಬಣ್ಣ, ಅನೇಕ ಬಾರಿ ಝೆನ್ ಗುರು ತನ್ನ ಶಿಷ್ಯನನ್ನು ಆಘಾತಕ್ಕೊಡ್ಡಿ ಆತನ ಪೂರ್ವಗ್ರಹ ಪೀಡಿತ ಮನಸ್ಸಿನ ತಾರ್ಕಿಕ ಗುಂಗಿನ ಪರದೆಯನ್ನು ಹರಿದು ಸತ್ಯದ ದರ್ಶನಕ್ಕೆ ನೆರವಾಗುವಂತೆ, ಸಮಾಜವನ್ನು ಛೇಡಿಸಿ ಆಘಾತ ಕೊಡುವ ಮೂಲಕ ಆಧುನಿಕತೆಯ ಸುಖ-ಭೋಗಗಳ ಗುಂಗಿನಲ್ಲಿ ಹೂತು ಹೋಗುವಂತೆ ಸಮಷ್ಟಿ ಮನಸ್ಸನ್ನು ಎಚ್ಚರಿಸಲು ಪ್ರಯತ್ನಿಸುತ್ತಾರೆ"[೧೧] ಎಂದು ಹೇಳುತ್ತಾರೆ.

ಒಂದನ್ನು ಇನ್ನೊಂದರ ಹೋಲಿಕೆಯಲ್ಲಿ ಅರ್ಥೈಸಿಕೊಂಡು ಜೀವನದ ಸಂದರ್ಭದಲ್ಲಿ ಅದನ್ನು ಮರುಸ್ಥಾಪಿಸಿಕೊಂಡು ಗ್ರಹಿಸುತ್ತಾ ಹೋಗುವುದು ಸುಬ್ಬಣ್ಣನವರ ವಿಶೇಷತೆ ಎಂದೆ ಹೇಳಬಹುದು.

ರಾಮಮನೋಹರ ಲೋಹಿಯರ ಅತ್ಯಂತ ಸೃಜನಶೀಲ ಬರಹಗಳ ಲೇಖನಗಳ ಸಂಕಲನವಾದ 'ರಾಜಕೀಯದ ಮಧ್ಯೆ ಬಿಡುವು' ಪುಸ್ತಕವನ್ನು ಸುಬ್ಬಣ್ಣನವರು ಕನ್ನಡಕ್ಕೆ ತಂದರು. ಅವರು ಅನುವಾದಕ್ಕೆ ಆಯ್ಕೆ ಮಾಡಿಕೊಂಡಿರುವ ಲೋಹಿಯಾರವರ ಬರಹಗಳು ಕುತೂಹಲ ಕೆರಳಿಸುವಂಥಹುಗಳಾಗಿವೆ. ರಾಮಕೃಷ್ಣ

---

[೧೦] ಅದೇ, ಪು.೫೭.

[೧೧] ರಂಗಧಾಮ, ಶ್ರೀ ಕೆ.ವಿ. ಸುಬ್ಬಣ್ಣ ಅಭಿನಂದನ ಗ್ರಂಥ, ಸಂಪಾದಕ: ಟಿ. ಮಹಾಬಲೇಶ್ವರ ಭಟ್ಟ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೦೫, ಪು.೬೯.

ಶಿವ' 'ವ್ಯಕ್ತಿತ್ವ ನಿರ್ಮಾಣ; ಒಂದು ಕರೆ', 'ಇಂಡಿಯಾದ ನದಿಗಳು', ಇಂಡಿಯಾದ ಜನಗಳ ಏಕತೆ', 'ಸೌಂದರ್ಯ ಮತ್ತು ವೈಬಣ್ಣ', 'ಕಲ್ಲಿನ ಮಾತು' ಹಾಗೂ ಲೋಹಿಯಾರ ಭಾಷೆಯ ಕುರಿತ ಅನುವಾದಗಳು – ಮೊದಲಾದವುಗಳನ್ನು ಇಲ್ಲಿ ಹೆಸರಿಸಬಹುದು. ಅತ್ಯಂತ ಕ್ರಿಯಾಶೀಲ ರಾಜಕಾರಣಿ ಮಾತ್ರವಲ್ಲದೆ, ಅತ್ಯಂತ ಸೃಜನಶೀಲ ಬರಹಗಾರರಾದ ಲೋಹಿಯಾರವರು ಸಮಾಜವಾದದ ದೃಷ್ಟಿಕೋನವುಳ್ಳವರಾಗಿದ್ದರು. ಮತ್ತು ಯಾವುದೇ ಸಿದ್ಧಾಂತ ಅಥವಾ ಸಿದ್ಧ ತತ್ವಗಳನ್ನು ಸುಲಭವಾಗಿ (ಬ್ರೆಕ್ಟ್ ಮತ್ತು ರ್ಘುನ್ ಕೂಡ ಯಾವುದೇ ಸಿದ್ಧಾಂತ, ತತ್ತ್ವಕ್ಕೆ ಬದ್ಧರಾಗಿರಲಿಲ್ಲ ಎಂಬುದನ್ನು ಅರಿತರೆ ಸುಬ್ಬಣ್ಣನವರ ಅನುವಾದದ ಗ್ರಹಿಕೆಯ ಸ್ವರೂಪವನ್ನು ತಿಳಿದುಕೊಳ್ಳಬಹುದು) ಒಪ್ಪಿಕೊಳ್ಳದೆ ಚಿಂತಿಸುತ್ತಿದ್ದರು.

ಲೋಹಿಯರವರು ಇಡೀ ಭಾರತೀಯ ಸಂಸ್ಕೃತಿಯನ್ನೇ ವಿಮರ್ಶಾತ್ಮಕವಾಗಿ ಪರಿಶೀಲಿಸುತ್ತಾರೆ. ರಾಮ, ಕೃಷ್ಣ, ಶಿವ – ಎಂದೋ ಆಗಿ ಹೋದ ಪೌರಾಣಿಕ ಪಾತ್ರಗಳಾದೆ, ಸಮಕಾಲೀನರಾಗಿಯೂ ಅವರಿಗೆ ಕಾಣಿಸುತ್ತಾರೆ. ಆ ಮೂಲಕ ಈ ಮೂರು ಜನರ ವ್ಯಕ್ತಿತ್ವಗಳನ್ನು ಅನಾವರಣಗೊಳಿಸುತ್ತ ಹೋಗುತ್ತಾರೆ. ಮತ್ತು ಈ ಪೌರಾಣಿಕ ಪಾತ್ರಗಳ ಜತೆಗೆ, ಭಾರತದ ನದಿ, ಊರು, ಜಾತಿಗಳು, ಶಿಲ್ಪ ಮತ್ತು ಐತಿಹ್ಯ ಹಾಗೂ ಪುರಾಣಗಳು, ಎಲ್ಲವುದರುಗಳ ಪರಿಶೀಲನೆ ಅವರಿಗೆ ಅಷ್ಟೇ ಮುಖ್ಯವಾಗಿ ಕಾಣುತ್ತವೆ. ಒಟ್ಟಾರೆ ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯ ನಂತರದ ಅವರ ಸಾಂಸ್ಕೃತಿಕ ಬರಹಗಳಿಗೆ ಎಲ್ಲ ಕಾಲದಲ್ಲೂ ಮಹತ್ವವಿದೆ.

ಸಮಾಜವಾದದಲ್ಲಿ ನಂಬಿಕೆಯುಳ್ಳ ಲೋಹಿಯಾರವರು ಜರ್ಮನ್ ಭಾಷೆಯಲ್ಲಿ ಮಾರ್ಕ್ಸ್ ಮತ್ತು ಹೆಗೆಲ್‌ರ ಕೃತಿಗಳನ್ನು ಆಳವಾಗಿ ಅಭ್ಯಾಸ ಮಾಡಿದವರಾಗಿದ್ದರು. 'ದಿ ಕಾಸ್ಟ್ ಸಿಸ್ಟಮ್', 'ಮಾರ್ಕ್ಸ್, ಗಾಂಧಿ ಅಂಡ್ ಸೋಷಲಿಸಂ' ಮತ್ತು 'ಸಮಾಜವಾದಿ ಆಂದೋಲನ್ ಕಾ ಇತಿಹಾಸ್' – ಮೊದಲಾದ ಪ್ರಮುಖ ಕೃತಿಗಳನ್ನು ಅವರು ರಚಿಸಿದ್ದಾರೆ.

ಲೋಹಿಯಾರವರು ಸಮಾಜವಾದವನ್ನು ಕೇವಲ ಸರಳವಾದ ಗ್ರಹಿಕೆಯಲ್ಲಿ ಅರ್ಥೈಸಿಕೊಂಡಿರಲಿಲ್ಲ. ಹಾಗಾಗೆ ಸಮಾಜ ಸುಧಾರಣೆಗಿಂತ ಮೀರಿದ ಕ್ರಮವನ್ನು ಅವರ ಬರಹಗಳಲ್ಲಿ ಕಾಣಬಹುದು. ಸಾಮಾನ್ಯವಾಗಿ ಎಲ್ಲರೂ ಗ್ರಹಿಸುವಂತೆ: 'ಸಮಾಜವಾದವೆನ್ನುವುದು ಏಕಕಾಲಕ್ಕೆ ಮನುಷ್ಯ ಘನತೆಯಿಂದ ಬದುಕುವ ಹಾಗೂ ಆರೋಗ್ಯಕರ ರಾಜಕೀಯ ವ್ಯವಸ್ಥೆಯನ್ನು ಸೃಷ್ಟಿಸುವ ಮಾರ್ಗವೆಂದು ತಮ್ಮ ಬರಹ ಹಾಗೂ ರಾಜಕಾರಣಿಗಳ ಮೂಲಕ ಲೋಹಿಯಾ ಕಾಣಿಸಿಕೊಟ್ಟಿದ್ದಾರೆ" ಎಂಬುದನ್ನು ಇಲ್ಲಿ ಹೇಳಬಹುದು.

ಸುಬ್ಬಣ್ಣನವರು ಸಮಾಜವಾದಿ ದೃಷ್ಟಿಕೋನವುಳ್ಳವರಾಗಿದ್ದರಿಂದ, ಲೋಹಿಯರ ಬಗೆಗೆ ಸ್ವಲ್ಪ ವಿವರಿಸಬೇಕಾಯಿತು. ಸುಬ್ಬಣ್ಣನವರ ಅನುವಾದ ಗ್ರಹಿಕೆಯ ಸ್ವರೂಪಗಳು, ವೈಯಕ್ತಿಕಾಪೇಕ್ಷೆಗಿಂತ ಹೆಚ್ಚಾಗಿ ಸಮುದಾಯಾಪೇಕ್ಷೆಗಳ ಜತೆಗೆ ತಳುಕು ಹಾಕಿಕೊಂಡಿದೆಯೆಂಬುದನ್ನು ಮರೆಯುವಂತಿಲ್ಲ. ಸುಬ್ಬಣ್ಣನವರು ಸಾಮಾಜಿಕ, ರಾಜಕೀಯ, ರಂಗಭೂಮಿ, ಸಿನಿಮಾ, ನಾಟಕ ಮತ್ತು ಸಾಹಿತ್ಯ ಹಾಗೂ ಸಂಘಟನೆ – ಹೀಗೆ ಅನೇಕ ಕ್ಷೇತ್ರಗಳಲ್ಲಿ ತಮ್ಮ ಆಸಕ್ತಿಯನ್ನು ತೊಡಗಿಸಿಕೊಂಡು ಅವೆಲ್ಲವನ್ನು 'ಹೆಗ್ಗೋಡಿ'ನಂತಹ (ಗ್ರಾಮದ ಜನಜೀವನವನ್ನು) ಪರಿಸರದಲ್ಲಿ ಆಪ್ತವಾಗಿಸಿಕೊಂಡವರು. ಒಟ್ಟಾರೆ ಇವೆಲ್ಲವುಗಳು ಸುಬ್ಬಣ್ಣನವರ ತಾತ್ತ್ವಿಕ ನಿಲುವುಗಳನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುತ್ತವೆ.

ಚಲನಚಿತ್ರಕ್ಕೆ ಸಂಬಂಧಿಸಿದ ಜಗತ್ತಿನ ಶ್ರೇಷ್ಠ ಚಿತ್ರಗಳ ಪರಿಚಯ ಪುಸ್ತಕವನ್ನು ಕನ್ನಡಕ್ಕೆ ತಂದ ಸುಬ್ಬಣ್ಣನವರು, ಅದರಲ್ಲಿ ಪ್ರತಿ ಚಿತ್ರಗಳ ಕಥಾ ಹಂದರವನ್ನು ಕೊಟ್ಟಿದ್ದಾರೆ. ಇಂತಹದೊಂದು ಪುಸ್ತಕ ಸುಬ್ಬಣ್ಣನವರಿಗೆ ವೈಯಕ್ತಿಕತೆಗಿಂತ ಹೆಚ್ಚಾಗಿ, ನೀನಾಸಮ್‌ನ ಚಿತ್ರ ಸಮಾಜಕ್ಕೆ ಅಗತ್ಯವೂ, ಅನಿವಾರ್ಯವೂ ಆಗಿತ್ತು. ಏಕೆಂದರೆ ನೀನಾಸಮ್ ಚಿತ್ರ ಸಮಾಜವು ಪುಣೆಯಿಂದ ಚಿತ್ರಗಳನ್ನು ತರಿಸಿ ಪ್ರತಿವಾರ ಚಿತ್ರಗಳನ್ನು ತೋರಿಸಲು ಪ್ರಾರಂಭಿಸಿತ್ತು. ಆ ಮೂಲಕ ಸುಬ್ಬಣ್ಣನವರು ಸಿನಿಮಾ ನೋಡುವ ಗ್ರಾಮೀಣ ಜನತೆಯ ಒಂದು ಸಮುದಾಯವನ್ನು ನಿರ್ಮಿಸಲು ಶ್ರಮಿಸಿದರು. ಐನ್‌ಸ್ಟೈನ್, ಫೆಲಿನಿ, ಕುರೊಸವ, ಮತ್ತು ಕಾಲ್ ಡ್ರೈಯರ್‌ರವರು ನಿರ್ದೇಶಿಸಿದ ಕಲಾತ್ಮಕ ಚಿತ್ರಗಳನ್ನು ಅವರಿಗೆ ತೋರಿಸಿ, ಅವರ ಸಂವೇದನೆಯನ್ನು ಬೆಳೆಸಲು ಸುಬ್ಬಣ್ಣನವರು ಕಾರಣರಾದರು ಎನ್ನಬಹುದು.

ಕೆ.ವಿ. ಸುಬ್ಬಣ್ಣನವರು, ಅಕ್ಷರರ ಜೊತೆಯಲ್ಲಿ 'ಸಿನೆಮಾದ ದೂರ ಚಿತ್ರ ಸಮೀಪ ಚಿತ್ರಗಳು' ಎಂಬ ಹೆಸರಿನಲ್ಲಿ ವಿಶ್ವದ ಹಲವಾರು ಚಿತ್ರಗಳನ್ನು ಕನ್ನಡಕ್ಕೆ ತಂದುದ್ದರ ಕುರಿತು ಎರಡು ಮಾತು ಹೇಳಬೇಕು. ಪ್ರಪಂಚದ ಚಲನಚಿತ್ರ ಇತಿಹಾಸದ ಸಿಂಹಾವಲೋಕನ ಮತ್ತು ೭೧ ಪ್ರಮುಖ ಚಿತ್ರಗಳ ಪರಿಚಯ ಹಾಗೂ ಅವುಗಳ ವಿಮರ್ಶೆಯನ್ನು ಈ ಪುಸ್ತಕದಲ್ಲಿ ಕೊಡಲಾಗಿದೆ. ಕಳೆದ (೨೦ನೇ) ಶತಮಾನದಲ್ಲಿ ಹೊಸ ಭಾಷೆಯಾಗಿ ಸೃಷ್ಟಿಕೊಂಡ 'ಸಿನೆಮಾ' ಮಾಧ್ಯಮದ ಬಗ್ಗೆ ಪ್ರಾಥಮಿಕ ಜ್ಞಾನವನ್ನು ತಿಳಿಸಿಕೊಡಲು, ಕನ್ನಡದಲ್ಲಿ ತರಲಾಯಿತು. ಈ ಪುಸ್ತಕವು ಸಿನೆಮಾ ಭಾಷೆಯು ಬೆಳೆದು ಬಂದ ಬಗೆಯನ್ನು ಕಾಲಘಟ್ಟಗಳ ಮೂಲಕ ಸ್ಥೂಲವಾಗಿ ಪರಿಚಯಿಸಿಕೊಡುತ್ತದೆ. ಇದರ ಜೊತೆಗೆ ಮೂಕ ಚಿತ್ರಗಳು–೧೨, ಶಬ್ದ ಚಿತ್ರಗಳು–೪೮ ಹಾಗೂ ಕಿರು ಚಿತ್ರಗಳು–೧೧ ಎಂಬುದಾಗಿ ವಿಭಾಗಗಳನ್ನಾಗಿ ಮಾಡಿಕೊಂಡು, ಆ ಚಿತ್ರಗಳ ಪರಿಚಯ ವಿಮರ್ಶೆಯನ್ನು ಕೊಡಲಾಗಿದೆ.

'ಸಿನೆಮಾದ ದೂರ ಚಿತ್ರ ಸಮೀಪ ಚಿತ್ರಗಳು' ಪುಸ್ತಕದಲ್ಲಿ ಪ್ರಮುಖವಾಗಿ, ಸಿನೆಮಾವನ್ನು ಒಂದು ಗಂಭೀರ ಅಭಿವ್ಯಕ್ತಿ ಮಾಧ್ಯಮ ಎಂದು ಪರಿಗಣಿಸಿಕೊಂಡ ಕಲಾತ್ಮಕ ಚಿತ್ರಗಳನ್ನು ಮಾತ್ರ ಕೊಡಲಾಗಿದೆ. ಈ ಪುಸ್ತಕದಲ್ಲಿ ಆಯ್ಕೆ ಮಾಡಿಕೊಂಡಿರುವ ಬಹುತೇಕ ಚಿತ್ರಗಳು ಪ್ರೇಕ್ಷಕನ ಸಂವೇದನೆಯನ್ನು ರೂಪಿಸುವಂಥದ್ದು, ಬೆಳೆಸುವಂಥದ್ದೇ ಆಗಿದೆ. ಸುಬ್ಬಣ್ಣನವರು ಹೆಗ್ಗೋಡಿನಲ್ಲಿ ಜನರಿಗಾಗಿ ತೋರಿಸುವ ಚಿತ್ರಗಳ ಆಯ್ಕೆಯ ಹಿಂದೆ ಅವರನ್ನು ಉತ್ತಮ ಚಿತ್ರಗಳನ್ನು ನೋಡಲು ತಯಾರು ಮಾಡುವ ಮತ್ತು ಅವರಲ್ಲಿ ಅತ್ಯುತ್ತಮ ಸಾಂಸ್ಕೃತಿಕ ಅಭಿರುಚಿಯನ್ನು ಬೆಳೆಸುವ ಸುಬ್ಬಣ್ಣನವರ ದೃಷ್ಟಿಕೋನ, ಆಸಕ್ತಿಗಳು ವ್ಯಕ್ತವಾಗುತ್ತವೆ.

ಒಟ್ಟಾರೆ ಸುಬ್ಬಣ್ಣನವರ ಅನುವಾದ, ರೂಪಾಂತರ ಕಾರ್ಯಗಳು, ನೀನಾಸಮ್‌ನ ರಂಗ ಪ್ರಯೋಗಗಳಿಗಾಗಿಯೆ ಅರ್ಥಾತ್ ಸಮುದಾಯದ ಒತ್ತಾಸೆಯಿಂದ ಕೈಗೊಂಡಿದ್ದೆಂದು ಹೇಳಬಹುದು.

ಅಧ್ಯಾಯ–೫

# ಪರಿಸರ ಕುರಿತು ಸುಬ್ಬಣ್ಣನವರ ಚಿಂತನೆ

ಪರಿಸರ ಸುಬ್ಬಣ್ಣನವರ ಮತ್ತೊಂದು ಆಸಕ್ತಿಯ ಕ್ಷೇತ್ರ. ಸಕಲ ಚರಾಚರಗಳಲ್ಲೂ ಜೀವಪರವಾದ ನಿಲುವುಗಳನ್ನು ಪ್ರತಿಪಾದಿಸುವ ಅವರ ಮಾನವೀಯ ವ್ಯಕ್ತಿತ್ವವು ಸಹಜವಾಗಿಯೇ ಪರಿಸರ ಕುರಿತು ಗಾಢವಾದ ಕಾಳಜಿಯನ್ನು ವ್ಯಕ್ತಪಡಿಸುತ್ತದೆ. ಸಮಾಜ ಮತ್ತು ಸಂಸ್ಕೃತಿಗಳ ಕುರಿತು ಮತ್ತೆ ಮತ್ತೆ ತಮ್ಮ ಬರಹಗಳಲ್ಲಿ ಪ್ರಸ್ತಾಪಿಸುವ ಸುಬ್ಬಣ್ಣನವರು, ಪರಿಸರದ ಕುರಿತು ಅಲ್ಲೊ ಇಲ್ಲೋ ಒಂದೆರಡು ಕಡೆಗಳಲ್ಲಿ ಅನುಷಂಗಿಕವಾಗಿ ಮಾತನಾಡುತ್ತಾರೆಯೇ ಹೊರತು ಪ್ರತ್ಯೇಕವಾಗಿ ಮಾತನಾಡುವುದು ಎಲ್ಲೂ ಕಂಡುಬರುವುದಿಲ್ಲ.

'ಅಡಿಕೆಯ ಮಾನ' ಎಂಬ ಲೇಖನದಲ್ಲಿ ಸುಬ್ಬಣ್ಣನವರು 'ಅಡಿಕೆ'ಗೆ ಸಂಬಂಧಪಟ್ಟಂತೆ ಹೇಳುವ ಕೆಲವು ಮುಖ್ಯ ಮಾತುಗಳನ್ನು ಗಮನಿಸಬೇಕು. ಮನುಷ್ಯ ಮತ್ತು ಪರಿಸರದ ನಡುವಿನ ಬಹು ಸೂಕ್ಷ್ಮ ಒಳನೋಟಗಳು ದಕ್ಕುತ್ತವೆ. 'ಅಡಿಕೆ'ಯನ್ನು ಭಾರತೀಯ ಸಂಸ್ಕೃತಿಯ ಭಾಗವಾಗಿ ನೋಡಬೇಕು ಎಂದು ತಿಳಿಸುವ ಈ ಲೇಖನದಲ್ಲಿ:

> "ಈ ವಸ್ತುವನ್ನು ಇವತ್ತು ನಾವು ದೇವ ಸಂಬಂಧದ ಕಲ್ಪನೆಯಲ್ಲಿ ಪರಿಗಣಿಸುವುದಿರಲಿ, ಮನುಷ್ಯ ಸಂಬಂಧಗಳ ಕಲ್ಪನೆಯಲ್ಲೂ ಪರಿಗಣಿಸದೆ ಹಣದ ಸಂಬಂಧದಲ್ಲಿ ಮಾತ್ರವೇ ಪರಿಗಣಿಸುತ್ತೇವೆ. ಅಂದರೆ ಅಡಿಕೆಯ ಮಾನವನ್ನು ಕಳೆದುಬಿಡುತ್ತೇವೆ. ಅಡಿಕೆಯ ಮಾನಭಂಗವಾದರೆ ಕೃಷಿಕರಿಗೆ ತಮ್ಮ ಮಕ್ಕಳ ಮಾನಭಂಗವಾಯಿತು ಅನ್ನಿಸಬೇಕು. ನಿಜವಾದ ಬೆಳೆಗಾರನು ತನ್ನ ಹೆಣ್ಣುಮಕ್ಕಳನ್ನು ಸಾಕುವ ಹಾಗೇ ಈ ಚಂದದ ಕಲ್ಪ ವೃಕ್ಷವನ್ನು ನೀರೆರೆದು ಉಣಿಸಿ ತಿನಿಸಿ ಮೈಮುಟ್ಟಿ ತಲೆ ಮೂಸಿ ಹಿಗ್ಗಿ ತುಂಬಿಕೊಂಡು ಸಾಕುತ್ತಾನೆ."[೧]

'ಅಡಿಕೆ'ಗೆ ಸಂಬಂಧಪಟ್ಟಂತೆ ಈ ಮೇಲಿನ ಮಾತುಗಳನ್ನು ಹೇಳಿದರೂ, ಸೂಕ್ಷ್ಮವಾಗಿ ಗಮನಿಸಿದರೆ ಅದು ಇಡೀ ಪರಿಸರದ ಬಗೆಗಿನ ಕಾಳಜಿಯನ್ನು ವ್ಯಕ್ತಪಡಿಸುತ್ತದೆ. ಪರಿಸರದಿಂದ ಸಿಗುವ ಅಮೂಲ್ಯ ಸಂಪತ್ತುಗಳನ್ನು, ಮನುಷ್ಯನು ನನ್ನ ಸ್ವಾರ್ಥಕ್ಕಾಗಿ ಮತ್ತು ಹಣದ ದುರಾಸೆಯಿಂದ ಅದರ ಮೇಲೆ ನಡೆಸುವ ಅತ್ಯಾಚಾರ, ಆಕ್ರಮಣಗಳನ್ನು ಕಂಡು ವಿರೋಧ ವ್ಯಕ್ತಪಡಿಸುತ್ತಾರೆ. ಜಾಗತೀಕರಣ, ಉದಾರೀಕರಣದ ನಂತರವಂತೂ, ಸ್ಪರ್ಧಾಜಗತ್ತು ನಿರ್ಮಾಣವಾಗಿ ಲಾಭ ಕೋರತನವೇ ಮೂಲ ಮನೋಧೋರಣೆಯಾಗಿರುವ ಮನುಷ್ಯನ ಮನಸ್ಸನ್ನು ಕಂಡು ಕನಲುತ್ತಾರೆ, ಪ್ರತಿಭಟಿಸುತ್ತಾರೆ. ಅಂದರೆ ಸುಬ್ಬಣ್ಣನವರು ಪರಿಸರವನ್ನು ಕೇವಲ ಸಂಪನ್ಮೂಲಗಳ ಭಾಗವಾಗಿ ಮಾತ್ರ ನೋಡುವುದಿಲ್ಲ; ಪರಿಸರವು ಜೀವ ಚೈತನ್ಯದ ಭಾಗವೆಂದೆ ಗ್ರಹಿಸಿಕೊಳ್ಳುತ್ತಾರೆ.

---

೧ ಕೆ.ವಿ. ಸುಬ್ಬಣ್ಣ, ನಮ್ಮ ತವಕ ತಲ್ಲಣಗಳು; ಅಭಿನವ; ಬೆಂಗಳೂರು: ೧೯೯೮, ಪು.೧೩೨.

ಸುಬ್ಬಣ್ಣನವರು ಗುರುತಿಸುವ ಐದು ಪ್ರಮುಖ (ದಲಿತ ಚಳುವಳಿ, ರೈತ ಚಳುವಳಿ, ಕನ್ನಡ ಚಳುವಳಿ, ಬಳಕೆದಾರರ ಚಳುವಳಿ) ಚಳುವಳಿಗಳಲ್ಲಿ ಪರಿಸರ ಚಳುವಳಿಯೂ ಒಂದು. ಪ್ರಜಾಪ್ರಭುತ್ವದ ತಾತ್ವಿಕ ಆಸ್ತಿವಾರದ ಮೇಲೆ ಚಳುವಳಿಗಳು ರೂಪುಗೊಳ್ಳಬೇಕು ಎಂದು ಹಂಬಲಿಸುವ ಸುಬ್ಬಣ್ಣನವರು, ಪರಿಸರ ಚಳುವಳಿಯನ್ನು 'ಜನ ಚಳುವಳಿ'ಯೆಂದು ರೂಪಿಸದೆ, 'ಸಮುದಾಯ ಚಳುವಳಿ'ಯಾಗಿ ರೂಪಿಸಬೇಕೆಂದು ವಿವರಿಸುತ್ತಾರೆ. ಪರಿಸರವನ್ನು ಸಹ ಅವರು ವ್ಯಕ್ತಿಗತವಾಗಿ ನೋಡುವುದಕ್ಕಿಂತ ಹೆಚ್ಚಾಗಿ, ಸಮುದಾಯದ ಮೂಲಕ ನೋಡಲು ಯತ್ನಿಸುತ್ತಾರೆಯೆನಿಸುತ್ತದೆ.

ದಲಿತ ಚಳುವಳಿ, ರೈತರ ಚಳುವಳಿ, ಕನ್ನಡ ಚಳುವಳಿ ಮತ್ತು ಬಳಕೆದಾರ ಚಳುವಳಿ ಹಾಗೂ ಪರಿಸರ ಚಳುವಳಿ–ಈ ಯಾವುವುಗಳು ಸ್ವಯಂ ಸಂಸ್ಕಾರವನ್ನು ಸಾಧಿಸಲು ಯತ್ನಿಸದೆ ಇರುವುದನ್ನು ಗುರುತಿಸುತ್ತಾರೆ. ಅಂದರೆ ಸುಬ್ಬಣ್ಣನವರ ಸಮುದಾಯ ಪ್ರಜ್ಞೆ ಪರಿಸರದ ಚಿಂತನೆಯಲ್ಲೂ ಕೆಲಸ ಮಾಡುತ್ತದೆ. ಸ್ವದೇಶಿ, ಸಹಬಾಳ್ವೆ, ಸಹಿಷ್ಣತೆ, ಸ್ವಾವಲಂಬನೆ ಮತ್ತು ಆಡಂಬರವಿಲ್ಲದ ಸರಳ ಜೀವನ ಮುಂತಾದವುಗಳನ್ನು ಪರಿಸರದ ತಾತ್ವಿಕ ನಿಲುವುಗಳನ್ನಾಗಿ ರೂಪಿಸಿಕೊಳ್ಳುವಂತೆ ತಿಳಿಸುತ್ತಾರೆ.

ಪರಸರವು ಒಂದು ಆಂದೋಲನವಾಗಿ ರೂಪುಗೊಳ್ಳದೆ, ವೇದಿಕೆಯಾಗಿ ಕಾರ್ಯ ನಿರ್ವಹಿಸುತ್ತಿರುವುದರ ಅಪಾಯದ ಕುರಿತು ಚಿಂತಿಸುತ್ತಾರೆ. ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಸಮುದಾಯದ ಮುಖವಾಣಿಯಾಗಿ ಕ್ರಿಯಾಶೀಲಗೊಳ್ಳುವ 'ಜನ ಸಂಘಟನೆ'ಗಳ ಕುರಿತು ಚಿಂತಿಸುತ್ತಾರೆ. 'ಜನ ಸಂಘಟನೆ' (ಚಳುವಳಿ) ಮತ್ತು ವೇದಿಕೆಗಳೆರಡರ ನಡುವಿನ ಭಿನ್ನತೆಗಳನ್ನು ಗುರುತಿಸುತ್ತಾರೆ.

ಒಟ್ಟಾರೆ ಸುಬ್ಬಣ್ಣನವರು, ಈ ಎಲ್ಲಾ ಐದು ಚಳುವಳಿಗಳು ಪರಸ್ಪರ ಒಂದನ್ನೊಂದು ಅವಲಂಬಿಸದೆ ಅಥವಾ ಬೆಂಬಲಿಸದೆ ಬೆಳೆಯಲಿಲ್ಲವೆಂಬುದನ್ನು ಗುರುತಿಸಿಕೊಳ್ಳುತ್ತಾರೆ. ಒಂದು ಚಳುವಳಿಯು, ಮತ್ತೊಂದು ಚಳುವಳಿಯ ಸ್ವರೂಪ, ಅಸ್ತಿತ್ವವನ್ನು ಗುರುತಿಸದೆ ಅಥವಾ ಗಮನಿಸದೆ, ತನ್ನ ಬಗ್ಗೆಯೇ ಆಲೋಚಿಸುವ ಮೂಲಭೂತ ಸ್ವರೂಪವನ್ನು ಕುರಿತು ವಿಮರ್ಶಿಸುತ್ತಾರೆ ಮತ್ತು ಸಮಸ್ಯೆಗಳಿಗೆ ಪರಿಹಾರೋಪಾಯವಾಗಿ ಗಾಂಧೀಜಿಯವರ ತಾತ್ವಿಕ ಚಿಂತನೆ (ಸಮುದಾಯ)ಗಳನ್ನು, ಚಳುವಳಿಗಳ ಸ್ವರೂಪಕ್ಕೆ ತರಲು ಯತ್ನಿಸುತ್ತಾರೆ.

ಅಡಿಕೆಯ ಮಾನದ ಕುರಿತು ಬರೆಯುವಾಗ ಸುಬ್ಬಣ್ಣನವರು ಹೇಳುವ ಕೆಲವು ಸಾಲುಗಳನ್ನು ಗಮನಿಸಬೇಕು :

> "ಭೂಮಿಯಲ್ಲಿ ಬೆಳೆಯುವ ಎಲ್ಲ ಸಸ್ಯಗಳೂ ಪ್ರಯೋಜನಕಾರಿಗಳೇ – ಅಡಿಕೆ ಯಾಕೆ, ತಂಬಾಕು ಕೂಡಾ. 'ಗಾಳಿಯೂ ಸಮುದ್ರವೂ ಸಸ್ಯಗಳೂ ನಮಗೆ ಜೇನಾಗುತ್ತವೆ. ಅಮೃತವಾಗುತ್ತವೆ' ಅಂತ ಪ್ರಾಚೀನ ಋಷಿ ಹಾಡಿದ್ದ. ಒಂದೊಂದು ಸಸ್ಯದ ಸದುಪಯೋಗವೇನು ಎಂಬುದನ್ನು ನಾವು ಕಂಡುಕೊಳ್ಳಬೇಕು, ದುರುಪಯೋಗವನ್ನು ತಡೆಯಲು ಯತ್ನಿಸಬೇಕು."[೨]

ಪರಿಸರವು ತನ್ನ ಒಡಲಲ್ಲಿ ಮನುಷ್ಯನಿಗೆ ಉಪಯುಕ್ತವಾಗುವಂತಹ ಅನೇಕ ಸಂಪನ್ಮೂಲಗಳನ್ನು ಹುದುಗಿಸಿಕೊಂಡಿದೆ. ಆದರೆ ಮನುಷ್ಯ ಪರಿಸರ ಪ್ರಪಂಚವನ್ನು ಲಾಭದಾಯಕವಾಗಿ ಮಾತ್ರವೇ ಪರಿಗಣಿಸುವ

---

೨ ಅದೇ, ಪು.೧೩೧.

ಅಥವಾ ಬಳಸಿಕೊಳ್ಳುವ ಹೀನಕೃತ್ಯದಲ್ಲಿ ತೊಡಗಿಕೊಂಡಿದ್ದಾನೆ. ಹಣ, ಲಾಭಕೋರತನ ಇವೇ ಮೊದಲಾದವುಗಳು ಮುಖ್ಯವಾಗಿ ಕೊಳ್ಳುಬಾಕ ಸಂಸ್ಕೃತಿಯು ನಿರ್ಮಾಣವಾಗುತ್ತಿದೆ. ಅಂತಿಮವಾಗಿ ವಾಣಿಜ್ಯ ಲಾಭದ ದಾಹವೇ ಮುಖ್ಯೋದ್ದೇಶವಾಗಿರುವ ಇಂತಹ ಪರಿಸ್ಥಿತಿಯಲ್ಲಿ ಅನೇಕ ಕಾರಣಗಳನ್ನು ಊಹಿಸಬಹುದು.

ಮತ್ತೊಬ್ಬ ಪ್ರಮುಖ ಚಿಂತಕರು ಮತ್ತು ಲೇಖಕರಾದ ತೇಜಸ್ವಿಯವರು ಪರಿಸರದ ಕುರಿತು ಗಾಢವಾಗಿ ಚಿಂತಿಸಿದವರೆ ಆಗಿದ್ದಾರೆ. ಸುಬ್ಬಣ್ಣ ಮತ್ತು ತೇಜಸ್ವಿ ಇಬ್ಬರು ಆಧುನಿಕ ವಿದ್ಯಾಭ್ಯಾಸದ ನಂತರ ಕೃಷಿಯನ್ನು ತಮ್ಮ ಜೀವನಾವೃತ್ತಿಯನ್ನಾಗಿ ಅವಲಂಬಿಸಿಕೊಂಡು ಪರಿಸರದ (ಮಲೆನಾಡಿನ) ಮಧ್ಯೆ ಬದುಕು ರೂಪಿಸಿಕೊಂಡರು. ಹಾಗಾಗಿ ಇವರಿಬ್ಬರ ನಡುವಿನ ಪರಿಸರ ಕುರಿತ ಚಿಂತನೆಗಳು ಭಿನ್ನವಾಗಿವೆ. ಸುಬ್ಬಣ್ಣನವರು ಪರಿಸರವನ್ನು ಏಕಮುಖ ನೆಲೆಯಲ್ಲಿ ಮಾತ್ರವೇ ಚಿಂತಿಸಲು ಅಥವಾ ಕಂಡುಕೊಳ್ಳಲು ಯತ್ನಿಸುತ್ತಾರೆಯೆನಿಸುತ್ತದೆ. ಆದರೆ ತೇಜಸ್ವಿಯವರು ಸುಬ್ಬಣ್ಣನವರಿಗಿಂತ ಭಿನ್ನವಾಗಿ ಚಿಂತಿಸುತ್ತಾರೆ. ಅವರದೆ ಆದ ಈ ಕೆಳಗಿನ ಮಾತುಗಳನ್ನು ಗಮನಿಸಬೇಕು.

> "ನಾವಿನ್ನೂ ಗಾಂಧೀಜಿಯವರ ಗ್ರಾಮಸ್ವರಾಜ್ಯ, ವಿಕೇಂದ್ರೀಕರಣ, ಸರಳ ಜೀವನ ಇತ್ಯಾದಿಗಳ ಹಂಬಲದಲ್ಲೇ ಇದ್ದೇವೆ. ಗ್ಯಾಟ್ ಒಪ್ಪಂದದ ದೂರಗಾಮೀ ಪರಿಣಾಮಗಳನ್ನು ಅವಲೋಕಿಸಿದರೆ ರಾಷ್ಟ್ರೀಯತೆ, ದೇಶಪ್ರೇಮ ಇತ್ಯಾದಿಗಳ ಅರ್ಥ ಅಸ್ಪಷ್ಟವಾಗುತ್ತದೆ. ಆರ್ಥಿಕ ಜಾಗತೀಕರಣದತ್ತ ಧಾವಿಸುತ್ತಿರುವ ನಾಗರೀಕತೆಯಲ್ಲಿ ಸ್ವಾವಲಂಬನೆ ಆರ್ಥಿಕ ಅಪರಾಧದಂತೆ ಕಾಣುತ್ತದೆ. ದಿನವೂ ನೂರಾರು ವಸ್ತುಗಳನ್ನು ಉತ್ಪಾದಿಸಿ ಜಾಹೀರಾತುಗಳ ಮುಖಾಂತರ ಪ್ರಚೋದಿಸುತ್ತಿರುವ ಆಧುನಿಕ ಕೈಗಾರಿಕೆಗಳಿಗೆ ಸರಳಜೀವನ ಸೋಂಕು ರೋಗದಂತೆ ಭಯಾನಕವಾಗಿ ಕಾಣುತ್ತದೆ."[3]

ತೇಜಸ್ವಿಯವರು ಬಹುಮುಖಿ ನೆಲೆಯಲ್ಲಿ ಚಿಂತಿಸುತ್ತಾರೆ. ಅದು ವಾಣಿಜ್ಯ ಲಾಭಕ್ಕೆ ಸಂಬಂಧಿಸಿದಂತೆ, ಗ್ರಾಮ್ಯಜೀವನದ ಮನುಷ್ಯನ ಕುಲಕಸಬುಗಳಿಗೆ ಸಂಬಂಧಿಸಿದಂತೆ ಮತ್ತು ಜಾಗತೀಕರಣ, ಉದಾರೀಕರಣ ಎಂಬುವುಗಳ ಆಧುನಿಕ ಭರಾಟೆಯಲ್ಲಿ ಸಾಂಸ್ಕೃತಿಕ ಪಲ್ಲಟಗಳಿಗೆ ಸಂಬಂಧಿಸಿದಂತೆ ಚಿಂತಿಸುತ್ತಾರೆ. ಹೀಗಾಗೆ ತೇಜಸ್ವಿಯವರು, 'ಭಾರತದ ಆಧುನೀಕರಣದ ಕತೆಯೆಂದರೆ ಒಬ್ಬರ ಅನ್ನ ಇನ್ನೊಬ್ಬರು ಕಿತ್ತುಕೊಂಡ ಕತೆ'[೪] ಎಂಬ ಬಹುಮುಖ್ಯವಾದ ಮಾತೊಂದನ್ನು ಹೇಳುತ್ತಾರೆ. ಒಟ್ಟು ತೇಜಸ್ವಿಯವರು ಸಾಂಸ್ಕೃತಿಕ ಸ್ಥಿತ್ಯಂತರಗಳ ಕುರಿತು ಚಿಂತಿಸುತ್ತಾರೆ.

ಈ ಹಿನ್ನೆಲೆಯಲ್ಲಿ ನಾವು ಪ್ರಸ್ತುತ ವಿಶೇಷ ಆರ್ಥಿಕ ವಲಯ (SEZ) ವನ್ನು ಅರ್ಥೈಸಿಕೊಳ್ಳಬೇಕಾಗಿದೆ.

---

೩ ಕೆ.ಪಿ. ಪೂರ್ಣಚಂದ್ರ ತೇಜಸ್ವಿ; ಸಹಜಕೃಷಿ; ಪುಸ್ತಕ ಪ್ರಕಾಶನ, ಮೈಸೂರು, ೨೦೦೧, ಪು.೪.

೪ ಅದೇ, ಪು.೨.

ನಮ್ಮ ಸರ್ಕಾರವೇ 'ವಿಶೇಷ ಆರ್ಥಿಕ ವಲಯ' ಎಂಬ ನೆಪದಲ್ಲಿ ವಿದೇಶಿ ಬಂಡವಾಳಗಾರರಿಗೆ ಕುಮ್ಮಕ್ಕು ನೀಡುತ್ತ, ರೈತರ ಭೂಮಿಯನ್ನು ಕಬಳಿಸಲು ಅನುವು ಮಾಡಿಕೊಡುತ್ತಿದೆ. ಕೈಗಾರೀಕರಣದ ನೆಪದಲ್ಲಿ ತೇಜಸ್ವಿಯವರು ಹೇಳುವಂತೆ ಒಬ್ಬರ ಅನ್ನ ಮತ್ತೊಬ್ಬರು ಕಿತ್ತು ಕೊಳ್ಳುವುದೆ ಆಗುತ್ತದೆ. ಅಷ್ಟೇ ಅಲ್ಲ ಆರಣ್ಯ ನಾಶ ಅರ್ಥಾತ್ ಪರಿಸರ ನಾಶವೂ ಸಂಭವಿಸುತ್ತದೆ. ಇದರ ಜೊತೆಗೆ ಮನುಷ್ಯ–ಮನುಷ್ಯರ ನಡುವಿನ ಸಂಬಂಧದ ಪರಿಸರವೂ ಕೂಡ ಕಲುಷಿತಗೊಳ್ಳುತ್ತದೆ. ಒಟ್ಟಾರೆ ತೇಜಸ್ವಿಯವರು ಸಾಮಾಜಿಕ ಮತ್ತು ಸಂಸ್ಕೃತಿಯ ಸಂಬಂಧದ ಸ್ವರೂಪದಲ್ಲೂ ಪರಿಸರವನ್ನು ಕುರಿತು ಚಿಂತಿಸುತ್ತಾರೆ ಎಂಬುದು ನನ್ನ ಗ್ರಹಿಕೆ. ಆದರೆ ಸುಬ್ಬಣ್ಣನವರು ಪರಿಸರವನ್ನು ವಿಶಾಲವಾದ ವ್ಯಾಪ್ತಿಯಲ್ಲಿ ನೋಡುವುದಿಲ್ಲವೆನಿಸುತ್ತದೆ.

ಪರಿಸರವು ಇಂದು ಏಕಮುಖ ವ್ಯಾಖ್ಯಾನಕ್ಕೊಳಪಟ್ಟಿಲ್ಲ. ಅದರ ಅರ್ಥ, ಸ್ವರೂಪ ವಿಶಾಲವಾಗಿದ್ದು, ಬಹುಮುಖಿ ನೆಲೆಯಲ್ಲಿ ಕುರಿತು ಚಿಂತಿಸಲಾಗುತ್ತಿದೆ. ಪರಿಸರವನ್ನು ಕೇವಲ ಸೌಂದರ್ಯದ ಭಾಗವಾಗಿ ಮಾತ್ರವೇ ನೋಡದೆ, ಸಾಮಾಜಿಕ ಮತ್ತು ಸಂಸ್ಕೃತಿಯ ಸಂಬಂಧಗಳ ಸ್ವರೂಪದಲ್ಲೂ ಕುರಿತು ಚಿಂತಿಸಬೇಕಾಗುತ್ತದೆ.

ಸುಬ್ಬಣ್ಣನವರು ಮೂಲತಃ ಒಬ್ಬ ಬರಹಗಾರರವೂ ಹೌದು. ಹಾಗಾಗೆ ಅವರ ಕೆಲವು ಬರಹಗಳು ಮತ್ತು ಭಾಷಣಗಳಲ್ಲಿ ರೂಪಕ, ಪ್ರತಿಮೆ ಮತ್ತು ವರ್ಣನೆಗಳು ಅಲ್ಲಲ್ಲಿ ಕಾಣಸಿಗುತ್ತವೆ. ಅವಗಾಹನೆಗಾಗಿ ಕೆಲವು ಸಾಲುಗಳನ್ನು ಇಲ್ಲಿ ಉಲ್ಲೇಖಿಸಬಹುದು :

> "ನೆಲದಲ್ಲಿ ನೆಟ್ಟುಕೊಂಡ ಬೀಜವು ಅಲ್ಲೇ ಮೊಗ್ಗು ಮೊಗವಡೆದು ಮುನ್ನೂಕಿ ಕೊಂಡು ಕ್ರಮೇಣ ಬೃಹದಾಕಾರದ ಮರವಾಗಿ ಉಪಬೃಂಹಿತವಾಗಿ ಬೆಳೆಯುತ್ತದೆ. ಬಾನನ್ನು ತುಂಬುತ್ತದೆ; ಅನಂತರ ತನ್ನ ಬೃಹತ್ತನ್ನು ಕಿರುಬೀಜವೊಂದರಲ್ಲಿ ಮರಳಿ ಆಕುಂಚಿನಗೊಳಿಸಿ ಸಂಗೋಪಿಸಿಕೊಳ್ಳುತ್ತದೆ."[೫]

ನನಗನಿಸುವ ಹಾಗೆ ಈ ಮೇಲಿನ ಮಾತುಗಳು, ಏಕಕಾಲದಲ್ಲಿ ಪರಿಸರ ಕುರಿತ ಪ್ರತಿಮೆಯೂ ಹೌದು; ಸಮುದಾಯದ ಸಮಸ್ತ ಪ್ರತಿಮೆಯೂ ಹೌದು.

---

೫ ಕೆ.ವಿ. ಸುಬ್ಬಣ್ಣ, ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು; ಅಕ್ಷರ ಪ್ರಕಾಶನ; ಸಾಗರ, ೨೦೦೦, ಪು.೧೫.

ಅಧ್ಯಾಯ–೫

# ಪರಿಸರ ಕುರಿತು ಸುಬ್ಬಣ್ಣನವರ ಚಿಂತನೆ

ಪರಿಸರ ಸುಬ್ಬಣ್ಣನವರ ಮತ್ತೊಂದು ಆಸಕ್ತಿಯ ಕ್ಷೇತ್ರ. ಸಕಲ ಚರಾಚರಗಳಲ್ಲೂ ಜೀವಪರವಾದ ನಿಲುವುಗಳನ್ನು ಪ್ರತಿಪಾದಿಸುವ ಅವರ ಮಾನವೀಯ ವ್ಯಕ್ತಿತ್ವವು ಸಹಜವಾಗಿಯೇ ಪರಿಸರ ಕುರಿತು ಗಾಢವಾದ ಕಾಳಜಿಯನ್ನು ವ್ಯಕ್ತಪಡಿಸುತ್ತದೆ. ಸಮಾಜ ಮತ್ತು ಸಂಸ್ಕೃತಿಗಳ ಕುರಿತು ಮತ್ತೆ ಮತ್ತೆ ತಮ್ಮ ಬರಹಗಳಲ್ಲಿ ಪ್ರಸ್ತಾಪಿಸುವ ಸುಬ್ಬಣ್ಣನವರು, ಪರಿಸರದ ಕುರಿತು ಅಲ್ಲೊ ಇಲ್ಲೋ ಒಂದೆರಡು ಕಡೆಗಳಲ್ಲಿ ಅನುಷಂಗಿಕವಾಗಿ ಮಾತನಾಡುತ್ತಾರೆಯೇ ಹೊರತು ಪ್ರತ್ಯೇಕವಾಗಿ ಮಾತನಾಡುವುದು ಎಲ್ಲೂ ಕಂಡುಬರುವುದಿಲ್ಲ.

‘ಅಡಿಕೆಯ ಮಾನ’ ಎಂಬ ಲೇಖನದಲ್ಲಿ ಸುಬ್ಬಣ್ಣನವರು ‘ಅಡಿಕೆ’ಗೆ ಸಂಬಂಧಪಟ್ಟಂತೆ ಹೇಳುವ ಕೆಲವು ಮುಖ್ಯ ಮಾತುಗಳನ್ನು ಗಮನಿಸಬೇಕು. ಮನುಷ್ಯ ಮತ್ತು ಪರಿಸರದ ನಡುವಿನ ಬಹು ಸೂಕ್ಷ್ಮ ಒಳನೋಟಗಳು ದಕ್ಕುತ್ತವೆ. ‘ಅಡಿಕೆ’ಯನ್ನು ಭಾರತೀಯ ಸಂಸ್ಕೃತಿಯ ಭಾಗವಾಗಿ ನೋಡಬೇಕು ಎಂದು ತಿಳಿಸುವ ಈ ಲೇಖನದಲ್ಲಿ:

> “ಈ ವಸ್ತುವನ್ನು ಇವತ್ತು ನಾವು ದೇವ ಸಂಬಂಧದ ಕಲ್ಪನೆಯಲ್ಲಿ ಪರಿಗಣಿಸುವುದಿರಲಿ, ಮನುಷ್ಯ ಸಂಬಂಧಗಳ ಕಲ್ಪನೆಯಲ್ಲೂ ಪರಿಗಣಿಸದೆ ಹಣದ ಸಂಬಂಧದಲ್ಲಿ ಮಾತ್ರವೇ ಪರಿಗಣಿಸುತ್ತೇವೆ. ಅಂದರೆ ಅಡಿಕೆಯ ಮಾನವನ್ನು ಕಳೆದುಬಿಡುತ್ತೇವೆ. ಅಡಿಕೆಯ ಮಾನಭಂಗವಾದರೆ ಕೃಷಿಕರಿಗೆ ತಮ್ಮ ಮಕ್ಕಳ ಮಾನಭಂಗವಾಯಿತು ಅನ್ನಿಸಬೆಕು. ನಿಜವಾದ ಬೆಳೆಗಾರನು ತನ್ನ ಹೆಣ್ಣುಮಕ್ಕಳನ್ನು ಸಾಕುವ ಹಾಗೇ ಈ ಚಂದದ ಕಲ್ಪ ವೃಕ್ಷವನ್ನು ನೀರೆರೆದು ಉಣಿಸಿ ತಿನಿಸಿ ಮೈಮುಟ್ಟಿ ತಲೆ ಮೂಸಿ ಹಿಗ್ಗಿ ತುಂಬಿಕೊಂಡು ಸಾಕುತ್ತಾನೆ.”[೧]

‘ಅಡಿಕೆ’ಗೆ ಸಂಬಂಧಪಟ್ಟಂತೆ ಈ ಮೇಲಿನ ಮಾತುಗಳನ್ನು ಹೇಳಿದರೂ, ಸೂಕ್ಷ್ಮವಾಗಿ ಗಮನಿಸಿದರೆ ಅದು ಇಡೀ ಪರಿಸರದ ಬಗೆಗಿನ ಕಾಳಜಿಯನ್ನು ವ್ಯಕ್ತಪಡಿಸುತ್ತದೆ. ಪರಿಸರದಿಂದ ಸಿಗುವ ಅಮೂಲ್ಯ ಸಂಪತ್ತುಗಳನ್ನು, ಮನುಷ್ಯನು ನನ್ನ ಸ್ವಾರ್ಥಕ್ಕಾಗಿ ಮತ್ತು ಹಣದ ದುರಾಸೆಯಿಂದ ಅದರ ಮೇಲೆ ನಡೆಸುವ ಅತ್ಯಾಚಾರ, ಆಕ್ರಮಣಗಳನ್ನು ಕಂಡು ವಿರೋಧ ವ್ಯಕ್ತಪಡಿಸುತ್ತಾರೆ. ಜಾಗತೀಕರಣ, ಉದಾರೀಕರಣದ ನಂತರವಂತೂ, ಸ್ಪರ್ಧಾಜಗತ್ತು ನಿರ್ಮಾಣವಾಗಿ ಲಾಭ ಕೋರತನವೇ ಮೂಲ ಮನೋಧೋರಣೆಯಾಗಿರುವ ಮನುಷ್ಯನ ಮನಸ್ಸನ್ನು ಕಂಡು ಕನಲುತ್ತಾರೆ, ಪ್ರತಿಭಟಿಸುತ್ತಾರೆ. ಅಂದರೆ ಸುಬ್ಬಣ್ಣನವರು ಪರಿಸರವನ್ನು ಕೇವಲ ಸಂಪನ್ಮೂಲಗಳ ಭಾಗವಾಗಿ ಮಾತ್ರ ನೋಡುವುದಿಲ್ಲ; ಪರಿಸರವು ಜೀವ ಚೈತನ್ಯದ ಭಾಗವೆಂದೆ ಗ್ರಹಿಸಿಕೊಳ್ಳುತ್ತಾರೆ.

---

೧ ಕೆ.ವಿ. ಸುಬ್ಬಣ್ಣ, ನಮ್ಮ ತವಕ ತಲ್ಲಣಗಳು; ಅಭಿನವ; ಬೆಂಗಳೂರು: ೧೯೯೮, ಪು.೧೩೨.

ಸುಬ್ಬಣ್ಣನವರು ಗುರುತಿಸುವ ಐದು ಪ್ರಮುಖ (ದಲಿತ ಚಳುವಳಿ, ರೈತ ಚಳುವಳಿ, ಕನ್ನಡ ಚಳುವಳಿ, ಬಳಕೆದಾರರ ಚಳುವಳಿ) ಚಳುವಳಿಗಳಲ್ಲಿ ಪರಿಸರ ಚಳುವಳಿಯೂ ಒಂದು. ಪ್ರಜಾಪ್ರಭುತ್ವದ ತಾತ್ವಿಕ ಅಸ್ತಿವಾರದ ಮೇಲೆ ಚಳುವಳಿಗಳು ರೂಪುಗೊಳ್ಳಬೇಕು ಎಂದು ಹಂಬಲಿಸುವ ಸುಬ್ಬಣ್ಣನವರು, ಪರಿಸರ ಚಳುವಳಿಯನ್ನು 'ಜನ ಚಳುವಳಿ'ಯೆಂದು ರೂಪಿಸದೆ, 'ಸಮುದಾಯ ಚಳುವಳಿ'ಯಾಗಿ ರೂಪಿಸಬೇಕೆಂದು ವಿವರಿಸುತ್ತಾರೆ. ಪರಿಸರವನ್ನು ಸಹ ಅವರು ವ್ಯಕ್ತಿಗತವಾಗಿ ನೋಡುವುದಕ್ಕಿಂತ ಹೆಚ್ಚಾಗಿ, ಸಮುದಾಯದ ಮೂಲಕ ನೋಡಲು ಯತ್ನಿಸುತ್ತಾರೆಯೆನಿಸುತ್ತದೆ.

ದಲಿತ ಚಳುವಳಿ, ರೈತರ ಚಳುವಳಿ, ಕನ್ನಡ ಚಳುವಳಿ ಮತ್ತು ಬಳಕೆದಾರ ಚಳುವಳಿ ಹಾಗೂ ಪರಿಸರ ಚಳುವಳಿ–ಈ ಯಾವುವುಗಳು ಸ್ವಯಂ ಸಂಸ್ಕಾರವನ್ನು ಸಾಧಿಸಲು ಯತ್ನಿಸದೆ ಇರುವುದನ್ನು ಗುರುತಿಸುತ್ತಾರೆ. ಅಂದರೆ ಸುಬ್ಬಣ್ಣನವರ ಸಮುದಾಯ ಪ್ರಜ್ಞೆ ಪರಿಸರದ ಚಿಂತನೆಯಲ್ಲೂ ಕೆಲಸ ಮಾಡುತ್ತದೆ. ಸ್ವದೇಶಿ, ಸಹಬಾಳ್ವೆ, ಸಹಿಷ್ಣತೆ, ಸ್ವಾವಲಂಬನೆ ಮತ್ತು ಆಡಂಬರವಿಲ್ಲದ ಸರಳ ಜೀವನ ಮುಂತಾದವುಗಳನ್ನು ಪರಿಸರದ ತಾತ್ವಿಕ ನಿಲುವುಗಳನ್ನಾಗಿ ರೂಪಿಸಿಕೊಳ್ಳುವಂತೆ ತಿಳಿಸುತ್ತಾರೆ.

ಪರಸರವು ಒಂದು ಆಂದೋಲನವಾಗಿ ರೂಪುಗೊಳ್ಳದೆ, ವೇದಿಕೆಯಾಗಿ ಕಾರ್ಯ ನಿರ್ವಹಿಸುತ್ತಿರುವುದರ ಅಪಾಯದ ಕುರಿತು ಚಿಂತಿಸುತ್ತಾರೆ. ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಸಮುದಾಯದ ಮುಖವಾಣಿಯಾಗಿ ಕ್ರಿಯಾಶೀಲಗೊಳ್ಳುವ 'ಜನ ಸಂಘಟನೆ'ಗಳ ಕುರಿತು ಚಿಂತಿಸುತ್ತಾರೆ. 'ಜನ ಸಂಘಟನೆ' (ಚಳುವಳಿ) ಮತ್ತು ವೇದಿಕೆಗಳೆರಡರ ನಡುವಿನ ಭಿನ್ನತೆಗಳನ್ನು ಗುರುತಿಸುತ್ತಾರೆ.

ಒಟ್ಟಾರೆ ಸುಬ್ಬಣ್ಣನವರು, ಈ ಎಲ್ಲಾ ಐದು ಚಳುವಳಿಗಳು ಪರಸ್ಪರ ಒಂದನ್ನೊಂದು ಅವಲಂಬಿಸದೆ ಅಥವಾ ಬೆಂಬಲಿಸದೆ ಬೆಳೆಯಲಿಲ್ಲವೆಂಬುದನ್ನು ಗುರುತಿಸಿಕೊಳ್ಳುತ್ತಾರೆ. ಒಂದು ಚಳುವಳಿಯು, ಮತ್ತೊಂದು ಚಳುವಳಿಯ ಸ್ವರೂಪ, ಅಸ್ಥಿತ್ವವನ್ನು ಗುರುತಿಸದೆ ಅಥವಾ ಗಮನಿಸದೆ, ತನ್ನ ಬಗ್ಗೆಯೇ ಆಲೋಚಿಸುವ ಮೂಲಭೂತ ಸ್ವರೂಪವನ್ನು ಕುರಿತು ವಿಮರ್ಶಿಸುತ್ತಾರೆ ಮತ್ತು ಸಮಸ್ಯೆಗಳಿಗೆ ಪರಿಹಾರೋಪಾಯವಾಗಿ ಗಾಂಧೀಜಿಯವರ ತಾತ್ವಿಕ ಚಿಂತನೆ (ಸಮುದಾಯ)ಗಳನ್ನು, ಚಳುವಳಿಗಳ ಸ್ವರೂಪಕ್ಕೆ ತರಲು ಯತ್ನಿಸುತ್ತಾರೆ.

ಅಡಿಕೆಯ ಮಾನದ ಕುರಿತು ಬರೆಯುವಾಗ ಸುಬ್ಬಣ್ಣನವರು ಹೇಳುವ ಕೆಲವು ಸಾಲುಗಳನ್ನು ಗಮನಿಸಬೇಕು :

> "ಭೂಮಿಯಲ್ಲಿ ಬೆಳೆಯುವ ಎಲ್ಲ ಸಸ್ಯಗಳೂ ಪ್ರಯೋಜನಕಾರಿಗಳೇ – ಅಡಿಕೆ ಯಾಕೆ, ತಂಬಾಕು ಕೂಡಾ. 'ಗಾಳಿಯೂ ಸಮುದ್ರವೂ ಸಸ್ಯಗಳೂ ನಮಗೆ ಜೇನಾಗುತ್ತವೆ. ಅಮೃತವಾಗುತ್ತವೆ' ಅಂತ ಪ್ರಾಚೀನ ಋಷಿ ಹಾಡಿದ್ದ. ಒಂದೊಂದು ಸಸ್ಯದ ಸದುಪಯೋಗವೇನು ಎಂಬುದನ್ನು ನಾವು ಕಂಡುಕೊಳ್ಳಬೇಕು, ದುರುಪಯೋಗವನ್ನು ತಡೆಯಲು ಯತ್ನಿಸಬೇಕು."[೨]

ಪರಿಸರವು ತನ್ನ ಒಡಲಲ್ಲಿ ಮನುಷ್ಯನಿಗೆ ಉಪಯುಕ್ತವಾಗುವಂತಹ ಅನೇಕ ಸಂಪನ್ಮೂಲಗಳನ್ನು ಹುದುಗಿಸಿಕೊಂಡಿದೆ. ಆದರೆ ಮನುಷ್ಯ ಪರಿಸರ ಪ್ರಪಂಚವನ್ನು ಲಾಭದಾಯಕವಾಗಿ ಮಾತ್ರವೇ ಪರಿಗಣಿಸುವ

[೨] ಅದೇ, ಪು.೧೩೧.

ಅಥವಾ ಬಳಸಿಕೊಳ್ಳುವ ಹೀನಕೃತ್ಯದಲ್ಲಿ ತೊಡಗಿಕೊಂಡಿದ್ದಾನೆ. ಹಣ, ಲಾಭಕೋರತನ ಇವೇ ಮೊದಲಾದವುಗಳು ಮುಖ್ಯವಾಗಿ ಕೊಳ್ಳುಬಾಕ ಸಂಸ್ಕೃತಿಯು ನಿರ್ಮಾಣವಾಗುತ್ತಿದೆ. ಅಂತಿಮವಾಗಿ ವಾಣಿಜ್ಯ ಲಾಭದ ದಾಹವೇ ಮುಖ್ಯೋದ್ದೇಶವಾಗಿರುವ ಇಂತಹ ಪರಿಸ್ಥಿತಿಯಲ್ಲಿ ಅನೇಕ ಕಾರಣಗಳನ್ನು ಊಹಿಸಬಹುದು.

ಮತ್ತೊಬ್ಬ ಪ್ರಮುಖ ಚಿಂತಕರು ಮತ್ತು ಲೇಖಕರಾದ ತೇಜಸ್ವಿಯವರು ಪರಿಸರದ ಕುರಿತು ಗಾಢವಾಗಿ ಚಿಂತಿಸಿದವರೆ ಆಗಿದ್ದಾರೆ. ಸುಬ್ಬಣ್ಣ ಮತ್ತು ತೇಜಸ್ವಿ ಇಬ್ಬರು ಆಧುನಿಕ ವಿದ್ಯಾಭ್ಯಾಸದ ನಂತರ ಕೃಷಿಯನ್ನು ತಮ್ಮ ಜೀವನಾವೃತ್ತಿಯನ್ನಾಗಿ ಅವಲಂಬಿಸಿಕೊಂಡು ಪರಿಸರದ (ಮಲೆನಾಡಿನ) ಮಧ್ಯೆ ಬದುಕು ರೂಪಿಸಿಕೊಂಡರು. ಹಾಗಾಗಿ ಇವರಿಬ್ಬರ ನಡುವಿನ ಪರಿಸರ ಕುರಿತ ಚಿಂತನೆಗಳು ಭಿನ್ನವಾಗಿವೆ. ಸುಬ್ಬಣ್ಣನವರು ಪರಿಸರವನ್ನು ಏಕಮುಖ ನೆಲೆಯಲ್ಲಿ ಮಾತ್ರವೇ ಚಿಂತಿಸಲು ಅಥವಾ ಕಂಡುಕೊಳ್ಳಲು ಯತ್ನಿಸುತ್ತಾರೆಯೆನಿಸುತ್ತದೆ. ಆದರೆ ತೇಜಸ್ವಿಯವರು ಸುಬ್ಬಣ್ಣನವರಿಗಿಂತ ಭಿನ್ನವಾಗಿ ಚಿಂತಿಸುತ್ತಾರೆ. ಅವರದೆ ಆದ ಈ ಕೆಳಗಿನ ಮಾತುಗಳನ್ನು ಗಮನಿಸಬೇಕು.

> "ನಾವಿನ್ನೂ ಗಾಂಧೀಜಿಯವರ ಗ್ರಾಮಸ್ವರಾಜ್ಯ, ವಿಕೇಂದ್ರೀಕರಣ, ಸರಳ ಜೀವನ ಇತ್ಯಾದಿಗಳ ಹಂಬಲದಲ್ಲೇ ಇದ್ದೇವೆ. ಗ್ಯಾಟ್ ಒಪ್ಪಂದದ ದೂರಗಾಮೀ ಪರಿಣಾಮಗಳನ್ನು ಅವಲೋಕಿಸಿದರೆ ರಾಷ್ಟ್ರೀಯತೆ, ದೇಶಪ್ರೇಮ ಇತ್ಯಾದಿಗಳ ಅರ್ಥ ಅಸ್ಪಷ್ಟವಾಗುತ್ತದೆ. ಆರ್ಥಿಕ ಜಾಗತೀಕರಣದತ್ತ ಧಾವಿಸುತ್ತಿರುವ ನಾಗರೀಕತೆಯಲ್ಲಿ ಸ್ವಾವಲಂಬನೆ ಆರ್ಥಿಕ ಅಪರಾಧದಂತೆ ಕಾಣುತ್ತದೆ. ದಿನವೂ ನೂರಾರು ವಸ್ತುಗಳನ್ನು ಉತ್ಪಾದಿಸಿ ಜಾಹೀರಾತುಗಳ ಮುಖಾಂತರ ಪ್ರಚೋದಿಸುತ್ತಿರುವ ಆಧುನಿಕ ಕೈಗಾರಿಕೆಗಳಿಗೆ ಸರಳಜೀವನ ಸೋಂಕು ರೋಗದಂತೆ ಭಯಾನಕವಾಗಿ ಕಾಣುತ್ತದೆ."[3]

ತೇಜಸ್ವಿಯವರು ಬಹುಮುಖಿ ನೆಲೆಯಲ್ಲಿ ಚಿಂತಿಸುತ್ತಾರೆ. ಅದು ವಾಣಿಜ್ಯ ಲಾಭಕ್ಕೆ ಸಂಬಂಧಿಸಿದಂತೆ, ಗ್ರಾಮ್ಯಜೀವನದ ಮನುಷ್ಯನ ಕುಲಕಸಬುಗಳಿಗೆ ಸಂಬಂಧಿಸಿದಂತೆ ಮತ್ತು ಜಾಗತೀಕರಣ, ಉದಾರೀಕರಣ ಎಂಬುವುಗಳ ಆಧುನಿಕ ಭರಾಟೆಯಲ್ಲಿ ಸಾಂಸ್ಕೃತಿಕ ಪಲ್ಲಟಗಳಿಗೆ ಸಂಬಂಧಿಸಿದಂತೆ ಚಿಂತಿಸುತ್ತಾರೆ. ಹೀಗಾಗೆ ತೇಜಸ್ವಿಯವರು, 'ಭಾರತದ ಆಧುನೀಕರಣದ ಕತೆಯೆಂದರೆ ಒಬ್ಬರ ಅನ್ನ ಇನ್ನೊಬ್ಬರು ಕಿತ್ತುಕೊಂಡ ಕತೆ'[4] ಎಂಬ ಬಹುಮುಖ್ಯವಾದ ಮಾತೊಂದನ್ನು ಹೇಳುತ್ತಾರೆ. ಒಟ್ಟು ತೇಜಸ್ವಿಯವರು ಸಾಂಸ್ಕೃತಿಕ ಸ್ಥಿತ್ಯಂತರಗಳ ಕುರಿತು ಚಿಂತಿಸುತ್ತಾರೆ.

ಈ ಹಿನ್ನೆಲೆಯಲ್ಲಿ ನಾವು ಪ್ರಸ್ತುತ ವಿಶೇಷ ಆರ್ಥಿಕ ವಲಯ (SEZ) ವನ್ನು ಅರ್ಥೈಸಿಕೊಳ್ಳಬೇಕಾಗಿದೆ.

---

೩ ಕೆ.ಪಿ. ಪೂರ್ಣಚಂದ್ರ ತೇಜಸ್ವಿ; ಸಹಜಕೃಷಿ; ಪುಸ್ತಕ ಪ್ರಕಾಶನ, ಮೈಸೂರು, ೨೦೦೧, ಪು.೪.

೪ ಅದೇ, ಪು.೨.

ನಮ್ಮ ಸರ್ಕಾರವೇ 'ವಿಶೇಷ ಆರ್ಥಿಕ ವಲಯ' ಎಂಬ ನೆಪದಲ್ಲಿ ವಿದೇಶಿ ಬಂಡವಾಳಗಾರರಿಗೆ ಕುಮ್ಮಕ್ಕು ನೀಡುತ್ತ, ರೈತರ ಭೂಮಿಯನ್ನು ಕಬಳಿಸಲು ಅನುವು ಮಾಡಿಕೊಡುತ್ತಿದೆ. ಕೈಗಾರೀಕರಣದ ನೆಪದಲ್ಲಿ ತೇಜಸ್ವಿಯವರು ಹೇಳುವಂತೆ ಒಬ್ಬರ ಅನ್ನ ಮತ್ತೊಬ್ಬರು ಕಿತ್ತು ಕೊಳ್ಳುವುದೆ ಆಗುತ್ತದೆ. ಅಷ್ಟೇ ಅಲ್ಲ ಅರಣ್ಯ ನಾಶ ಅರ್ಥಾತ್ ಪರಿಸರ ನಾಶವೂ ಸಂಭವಿಸುತ್ತದೆ. ಇದರ ಜೊತೆಗೆ ಮನುಷ್ಯ–ಮನುಷ್ಯರ ನಡುವಿನ ಸಂಬಂಧದ ಪರಿಸರವೂ ಕೂಡ ಕಲುಷಿತಗೊಳ್ಳುತ್ತದೆ. ಒಟ್ಟಾರೆ ತೇಜಸ್ವಿಯವರು ಸಾಮಾಜಿಕ ಮತ್ತು ಸಂಸ್ಕೃತಿಯ ಸಂಬಂಧದ ಸ್ವರೂಪದಲ್ಲೂ ಪರಿಸರವನ್ನು ಕುರಿತು ಚಿಂತಿಸುತ್ತಾರೆ ಎಂಬುದು ನನ್ನ ಗ್ರಹಿಕೆ. ಆದರೆ ಸುಬ್ಬಣ್ಣನವರು ಪರಿಸರವನ್ನು ವಿಶಾಲವಾದ ವ್ಯಾಪ್ತಿಯಲ್ಲಿ ನೋಡುವುದಿಲ್ಲವೆನಿಸುತ್ತದೆ.

ಪರಿಸರವು ಇಂದು ಏಕಮುಖ ವ್ಯಾಖ್ಯಾನಕ್ಕೊಳಪಟ್ಟಿಲ್ಲ. ಅದರ ಅರ್ಥ, ಸ್ವರೂಪ ವಿಶಾಲವಾಗಿದ್ದು, ಬಹುಮುಖಿ ನೆಲೆಯಲ್ಲಿ ಕುರಿತು ಚಿಂತಿಸಲಾಗುತ್ತಿದೆ. ಪರಿಸರವನ್ನು ಕೇವಲ ಸೌಂದರ್ಯದ ಭಾಗವಾಗಿ ಮಾತ್ರವೇ ನೋಡದೆ, ಸಾಮಾಜಿಕ ಮತ್ತು ಸಂಸ್ಕೃತಿಯ ಸಂಬಂಧಗಳ ಸ್ವರೂಪದಲ್ಲೂ ಕುರಿತು ಚಿಂತಿಸಬೇಕಾಗುತ್ತದೆ.

ಸುಬ್ಬಣ್ಣನವರು ಮೂಲತಃ ಒಬ್ಬ ಬರಹಗಾರರವೂ ಹೌದು. ಹಾಗಾಗೆ ಅವರ ಕೆಲವು ಬರಹಗಳು ಮತ್ತು ಭಾಷಣಗಳಲ್ಲಿ ರೂಪಕ, ಪ್ರತಿಮೆ ಮತ್ತು ವರ್ಣನೆಗಳು ಅಲ್ಲಲ್ಲಿ ಕಾಣಸಿಗುತ್ತವೆ. ಅವಗಾಹನೆಗಾಗಿ ಕೆಲವು ಸಾಲುಗಳನ್ನು ಇಲ್ಲಿ ಉಲ್ಲೇಖಿಸಬಹುದು :

> "ನೆಲದಲ್ಲಿ ನೆಟ್ಟುಕೊಂಡ ಬೀಜವು ಅಲ್ಲೇ ಮೊಗ್ಗು ಮೊಗವಡೆದು ಮುನ್ನೂಕಿ ಕೊಂಡು ಕ್ರಮೇಣ ಬೃಹದಾಕಾರದ ಮರವಾಗಿ ಉಪಬೃಂಹಿತವಾಗಿ ಬೆಳೆಯುತ್ತದೆ. ಬಾನನ್ನು ತುಂಬುತ್ತದೆ; ಅನಂತರ ತನ್ನ ಬೃಹತ್ತನ್ನು ಕಿರುಬೀಜವೊಂದರಲ್ಲಿ ಮರಳಿ ಆಕುಂಚಿನಗೊಳಿಸಿ ಸಂಗೋಪಿಸಿಕೊಳ್ಳುತ್ತದೆ."[೫]

ನನಗನಿಸುವ ಹಾಗೆ ಈ ಮೇಲಿನ ಮಾತುಗಳು, ಏಕಕಾಲದಲ್ಲಿ ಪರಿಸರ ಕುರಿತ ಪ್ರತಿಮೆಯೂ ಹೌದು; ಸಮುದಾಯದ ಸಮಸ್ತ ಪ್ರತಿಮೆಯೂ ಹೌದು.

---

[೫] ಕೆ.ವಿ. ಸುಬ್ಬಣ್ಣ, ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು; ಅಕ್ಷರ ಪ್ರಕಾಶನ; ಸಾಗರ, ೨೦೦೦, ಪು.೧೫.

# ಉಪಸಂಹಾರ

ಈವರೆಗೆ 'ಸುಬ್ಬಣ್ಣನವರ ಕನ್ನಡ ಸಂಸ್ಕೃತಿ ಚಿಂತನೆಯ ಸ್ವರೂಪದ ಕುರಿತು ಐದು ಅಧ್ಯಾಯಗಳ ಮೂಲಕ ವಿವೇಚಿಸಲಾಗಿದೆ. ಹೀಗೆಂದ ಮಾತ್ರಕ್ಕೆ ಸುಬ್ಬಣ್ಣನವರ ಸಂಸ್ಕೃತಿಯ ಚಿಂತನೆಯ ಕುರಿತು ಸಂಪೂರ್ಣವಾದ ಅಧ್ಯಯನವನ್ನು ಮಾಡಲಾಗಿದೆ ಎಂದು ಹೇಳುತ್ತಿಲ್ಲ. ಇನ್ನು ಹೆಚ್ಚಿನ ಅಧ್ಯಯನದ ಅಗತ್ಯತೆ ಇದ್ದೇ ಇದೆ ಎಂದು ಹೇಳಲಿಚ್ಛಿಸುತ್ತೇನೆ.

ಭಾಷೆ, ಸುಬ್ಬಣ್ಣನವರ ಚಿಂತನೆಯ ಕೇಂದ್ರ ಕಾಳಜಿಗಳಲ್ಲೊಂದು. ಭಾಷೆಯ ಕುರಿತು ಗಂಭೀರವಾದ ಅಧ್ಯಯನವನ್ನು ಕೈಗೊಳ್ಳುವ ಅವರು, 'ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು' ಕೃತಿಯಲ್ಲಿ ಹೊಸ ಓದನ್ನು ಕಂಡಿರಿಸಿದ್ದಾರೆ. ಹೀಗೆ ಪ್ರಾಚೀನ ಪಠ್ಯವೊಂದನ್ನು, ಪ್ರಸ್ತುತ ಕಾಲದ ಕೃತಿಯನ್ನಾಗಿ ಆಪ್ತವಾಗಿ ಮಾಡಿಕೊಂಡು, ಅದರ ಮೂಲಕ ಹೊಸ ಒಳನೋಟಗಳನ್ನು ದಕ್ಕಿಸಿಕೊಡುವ ಅವರ ಚಿಂತನೆಯ ಸ್ವರೂಪ ಅಗಾಧವಾದುದು.

ಸುಬ್ಬಣ್ಣನವರಿಗೆ ಭಾಷೆಯ ಕುರಿತು ಉತ್ಕಟವಾದ ವ್ಯಾಮೋಹ ಮತ್ತು ಅಭಿಮಾನವಿದೆ. ತಂದೆ-ತಾಯಿ, ಅಪ್ಪ-ಅಮ್ಮ ಮೊದಲಾದ ಸಂಬಂಧಗಳ ಆಪ್ತತೆ ಅರಿವಾದದ್ದು ಕನ್ನಡ ಭಾಷೆಯ ಮೂಲಕವೇ ಹಾಗೂ ಜಗತ್ತನ್ನು ಗ್ರಹಿಸಿಕೊಂಡದ್ದು ತನ್ನ ಸ್ವಭಾಷೆಯಿಂದಲೇ ಎಂಬ ಹೆಮ್ಮೆ ಅವರಿಗಿರುವುದನ್ನು ಹೇಳಿಕೊಳ್ಳುತ್ತಾರೆ ಈ ಬಗೆಯ ಅವರ ಗ್ರಹಿಕೆಯೇ, ಅವರನ್ನು ಭಾಷೆಯ ಸ್ವರೂಪ, ಸಮಕಾಲೀನ ಸಮಸ್ಯೆಗಳು ಅಥವಾ ಬಿಕ್ಕಟ್ಟುಗಳು, ಅನುಸಂಧಾನ ಹಾಗೂ 'ಸ್ವ' ಮತ್ತು 'ಅನ್ಯ' ಎಂಬ ಕಲ್ಪನೆಗಳನ್ನು ಪ್ರಖರವಾಗಿ ಕುರಿತು ಚಿಂತಿಸಲು ಸಾಧ್ಯವಾಗಿದೆ ಎಂದು ಹೇಳಬಹುದು.

ಯಾವುದೇ ಕ್ಷೇತ್ರಗಳಿಗೆ ಸಂಬಂಧಪಟ್ಟ ವಿಷಯವಾಗಲೀ, ಅವುಗಳನ್ನು ಅತ್ಯಂತ ಎಚ್ಚರದಿಂದ ಗಂಭೀರವಾಗಿ ಗಮನಿಸಿ, ಹೊಸ ರೀತಿಯಲ್ಲಿ ಹೇಳುವುದು (ಭಿನ್ನಾಭಿಪ್ರಾಯಗಳೇನೇ ಇರಲಿ) ಅಥವಾ ಹೊಸ ರೀತಿಯಲ್ಲಿ ಓದುವುದು ಹಾಗೂ ಇತರರು ಹೊಸ ಬಗೆಯಲ್ಲಿ ಚಿಂತಿಸುವಂತೆ ಪ್ರಚೋದಿಸುವುದು ಸುಬ್ಬಣ್ಣನವರ ಪ್ರಮುಖ ಗುಣ-ಲಕ್ಷಣವೇ ಆಗಿದೆಯೆನಿಸುತ್ತದೆ. ಹೀಗಾಗಿ, ಪಂಪನ ಕುರಿತ ಬಗೆಗಾಗಲಿ, ಅನಂತಮೂರ್ತಿಯವರ ಕಾದಂಬರಿಗಳ ಬಗೆಗಾಗಲಿ, ಆಧುನಿಕ ಕನ್ನಡ ಸಾಹಿತ್ಯದ ಕುರಿತ ಬಗೆಗಾಗಲಿ ಅಥವಾ ಬೇರ್‍ಯಾವುದೇ ವಿಷಯಗಳ ಬಗೆಗಾಗಲಿ, ಅವರ ಗ್ರಹಿಕೆಗಳು ಅರ್ಥಸಾಧ್ಯತೆಗಳನ್ನು ವಿಸ್ತರಿಸುವಲ್ಲಿ ಯತ್ನಿಸಿದ್ದನ್ನು ಕುರಿತು, ಎರಡನೆ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಇನ್ನೂ, ಸ್ಥಳಿಯತೆಯ ಕುರಿತ ಅವರ ಚಿಂತನೆಗಳು, ಸಮುದಾಯದ ಅಭೀಪ್ಸೆ, ಒಳಿತು ಮೊದಲಾದವುಗಳನ್ನು ಕೇಂದ್ರಮಾಡಿಕೊಂಡಿವೆ.

'ಶ್ರೇಷ್ಠತೆ' ಎಂಬ ಕಲ್ಪನೆಯನ್ನು ಕೇವಲ ಸಾಹಿತ್ಯಿಕವಾಗಿ ಮಾತ್ರವೇ ನೋಡದೆ, ಸಮಾಜ ಮತ್ತು ಸಂಸ್ಕೃತಿಗಳ ಸಂಬಂಧದ ಸ್ವರೂಪದಲ್ಲಿ ಗ್ರಹಿಸಿಕೊಂಡ ಬಗೆಯಂತೂ ಕುತೂಹಲಕರ. ಸಮಾನತೆ, ಸ್ವಾತಂತ್ರ್ಯ ಮುಂತಾದ ಪ್ರಜಾಪಭುತ್ವದ ಆದರ್ಶ ಮೌಲ್ಯಗಳ ಅಸ್ತಿವಾರದ ಮೇಲೆ ಸುಬ್ಬಣ್ಣನವರು ಅರ್ಥೈಸಿಕೊಂಡಿದ್ದಾರೆಯೆನಿಸುತ್ತದೆ.

'ನೀನಾಸಂ' ಇಡೀ ವಿಶ್ವಕ್ಕೆ ಒಂದು ಸಾಂಸ್ಕೃತಿಕ ಮಾದರಿ ಸಂಸ್ಥೆಯಾಗಿ ರೂಪು ತಳೆದು, ಸಮುದಾಯದ ಜ್ಞಾನವಿಕಾಸಕ್ಕೆ ಹೇಗೆ ಕಾರಣವಾಯಿತು ಮತ್ತು 'ಅಕ್ಷರ ಪ್ರಕಾಶನ'ವು ನವ್ಯ ಸಾಹಿತ್ಯ ಚಳುವಳಿಗೆ ಒತ್ತಾಸೆಯಾಗಿ ನಿಂತು, ಪುಸ್ತಕ ಸಂಸ್ಕೃತಿಯನ್ನು ವೃದ್ಧಿಸುವಲ್ಲಿ ವಹಿಸಿದ ಮಹತ್ತ್ವದ ಪಾತ್ರದ ಕುರಿತು (ಎರಡನೆಯ ಅಧ್ಯಾಯದಲ್ಲಿ) ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ, ನಾಟಕದ ಸ್ವರೂಪದ ಬಗೆಗಿನ ಸುಬ್ಬಣ್ಣನವರ ನಿಲುವುಗಳು ಮತ್ತು ನಾಟಕವನ್ನು ಅವರು ಕಂಡುಕೊಂಡ ಬಗೆ ಕುರಿತು ಹೇಳಲಾಗಿದೆ ಮತ್ತು 'ಹೊಸ ಶತಮಾನದ ಪರಿಭಾಷೆ' ಎಂದು ಕರೆದುಕೊಂಡ ಸಿನಿಮಾವನ್ನು ಹೊಸ ಅಭಿವ್ಯಕ್ತಿ ಮಾಧ್ಯಮವನ್ನಾಗಿ ರೂಪಿಸಿಕೊಂಡದ್ದನ್ನು ಚರ್ಚಿಸಲಾಗಿದೆ. ಇವುಗಳ ಜೊತೆಗೆ, ಅವರ ಸಮುದಾಯ ಪ್ರಜ್ಞೆ ಮತ್ತು ಕೋಮುವಾದವನ್ನು ಕುರಿತಂತೆ ಅವರ ಪ್ರಮುಖ ಆಶಯಗಳು, ಚಿಂತನೆಗಳನ್ನು ಕುರಿತು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಅನುವಾದವನ್ನು ಕುರಿತಂತೆ ಸುಬ್ಬಣ್ಣನವರ ಗ್ರಹಿಕೆಗಳೇನೆಂಬುದನ್ನು ಹೇಳಲು ಯತ್ನಿಸಲಾಗಿದೆ. ತಾನು ಬೆಳೆದು, ತನ್ಮೂಲಕ ಊರನ್ನು ಬೆಳೆಸಬೇಕೆಂಬ ಹಂಬಲ, ಕಾತರದಿಂದ ಕೈಗೊಂಡ ಬಹುಮುಖ್ಯ ಸೃಜನಶೀಲ ಚಟುವಟಿಕೆಗಳಲ್ಲಿ ಅವರ ಅನುವಾದ ಕಾರ್ಯವು ಒಂದು, ಇವೆಲ್ಲವೂಗಳ ಹಿಂದೆ ಗಾಂಧೀಜಿ, ಲೋಹಿಯಾ ಮತ್ತು ಗೋಪಾಲಗೌಡರು ಮೊದಲಾದವರ ಪ್ರಭಾವವಿದೆಯೆಂಬುದನ್ನು ಮರೆಯುವಂತಿಲ್ಲ.

ಸುಬ್ಬಣ್ಣನವರು ಪರಿಸರವನ್ನು ಕುರಿತಂತೆ ಪ್ರತ್ಯೇಕವಾಗಿ ಚಿಂತಿಸಿಲ್ಲ. ಹೀಗಾಗಿ ಪರಿಸರ ಕುರಿತ ಅವರ ಗ್ರಹಿಕೆಗಳು ಒಂದು ಸೀಮಿತ ನೆಲೆಯಲ್ಲಿ ಮಾತ್ರವೆ ಕಂಡುಬರುತ್ತದೆ. ಅವರ ಈ ಸೀಮಿತ ನೆಲೆಗೆ ಸಂಬಂಧಿಸಿದಂತೆ ಮಾತ್ರವೆ ಐದನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಒಟ್ಟಂದದಲ್ಲಿ ನನ್ನ ಪ್ರಬಂಧದ ಸೀಮಿತ ವ್ಯಾಪ್ತಿಯೊಳಗೆ, ಭಾಷೆ, ಸಾಹಿತ್ಯ, ಸಮಾಜ, ಸಂಸ್ಕೃತಿ, ಅನುವಾದ ಮತ್ತು ಪರಿಸರದ ಕುರಿತು ಸುಬ್ಬಣ್ಣ ಚಿಂತನೆಯ ಸ್ವರೂಪವನ್ನು ಅಧ್ಯಯನ ಮಾಡಲು ಯತ್ನಿಸಿದ್ದೇನೆ.

ಬೇಂದ್ರೆಯವರು ಚತುರ್ಮುಖ ಪ್ರಜ್ಞೆಗಳೆಂದು ಗುರುತಿಸುವ–'ಹೊರಗಣ್ಣ', 'ಒಳಗಣ್ಣ', 'ಹೊಳೆಗಣ್ಣ' ಮತ್ತು 'ತಿಳಿಗಣ್ಣ'-ಎಂಬುವುಗಳು ಸುಬ್ಬಣ್ಣನವರಲ್ಲಿ ಯಾವಾಗಲೂ ಹೊಳೆದು ಸ್ಫೋಟಗೊಳ್ಳುತ್ತಿತ್ತೆನಿಸುತ್ತದೆ. ಸುಬ್ಬಣ್ಣನವರ ತಾತ್ವಿಕ ನಿಲುವುಗಳು ಬೀಸುಹೇಳಿಕೆಗಳಿಂದಾಗಲೀ ಅಥವಾ ಅವಸರದ ನಿರ್ಣಯಗಳಿಂದಾಗಲೀ ನಿಷ್ಪನ್ನಗೊಂಡದ್ದಲ್ಲ: ಸಮುದಾಯದ ವಿವೇಕದಿಂದ, ಅದರ ಬಸಿರಿನಿಂದ ನಿಷ್ಪನ್ನಗೊಂಡದ್ದು. ಸ್ಥಳೀಯತೆ ಅವರ ಚಿಂತನೆಗಳ ಸ್ಥಾಯಿಭಾವವೆನಿಸುತ್ತದೆ. ಸುಬ್ಬಣ್ಣನವರ ಚಿಂತನೆಯ ಸ್ವರೂಪವನ್ನು ಒಂದೇ ಮಾತಿನಲ್ಲಿ 'ಸಮುದಾಯದ ಸಂಕೀರ್ತನ' ಎಂದು ಹೇಳಬಹುದೆ? ಎನಿಸುತ್ತದೆ.

# ಆಧಾರ ಗ್ರಂಥಗಳು


೧. ಅಶೋಕ ಟಿ.ಪಿ. (ಸಂ.) : ಅರೆಶತಮಾನದ ಅಲೆಬರಹಗಳು (ಅಕ್ಷರ ಪ್ರಕಾಶನ, ಸಾಗರ: ೨೦೦೪).

೨. ಅನಂತಮೂರ್ತಿ ಯು.ಆರ್. : ಬೆತ್ತಲೆ ಪೂಜೆಯಾಕೆ ಕೂಡದು? (ಅಕ್ಷರ ಪ್ರಕಾಶನ, ಸಾಗರ್: ೧೯೯೬).

೩. ಅಕ್ಷರ ಕೆ.ವಿ. ಸಮ್ಮುಖದಲ್ಲಿ ಸ್ವಗತ (ಅಕ್ಷರ ಪ್ರಕಾಶನ, ಸಾಗರ, ೨೦೦೨)

೪. ಕಾಳೇಗೌಡನಾಗವಾರ, ನಟರಾಜ್ ಹುಳಿಯಾರ್ (ಸಂ.) : ರಾಮಮನೋಹರ ಲೋಹಿಯಾ ಬರಹಗಳು, ಸಂಪುಟ: ಮೂರು (ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ; ಬೆಂಗಳೂರು, ೧೯೯೮).

೫. ಕೀರ್ತಿನಾಥ ಕುರ್ತಕೋಟಿ : ರಾಜಕೀಯ ಮತ್ತು ಧರ್ಮ (ಮನೋಹರ ಗ್ರಂಥಮಾಲಾ, ಧಾರವಾಡ, ೨೦೦೩).

೬. ಕೀರ್ತಿನಾತ ಕುರ್ತಕೋಟಿ : ಬಯಲು ಆಲಯ (ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೧೯೯೭).

೭. ಗೋಪಾಲಕೃಷ್ಣ ಅಡಿಗ ಎಂ. : ಸಾಕ್ಷಿ ಪ್ರಜ್ಞೆ (ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೦೪).

೮. ಗೋಪಾಲಕೃಷ್ಣ ಅಡಿಗ ಎಂ. : ಸಾಕ್ಷಿ ಪತ್ರಿಕೆ, ೯ನೇ ಸಂಚಿಕೆ (ಅಕ್ಷರ ಪ್ರಕಾಶನ, ಸಾಗರ: ಶರತ್ ಸಂಚಿಕೆ/೧೯೭೦).

೯. ಗೋಪಾಲಕೃಷ್ಣ ಅಡಿಗ ಎಂ. : ಸಾಕ್ಷಿ ಪತ್ರಿಕೆ, ೧೦ನೇ ಸಂಚಿಕೆ (ಅಕ್ಷರ ಪ್ರಕಾಶನ, ಸಾಗರ: ಹೇಮಂತ ಸಂಚಿಕೆ/೧೯೭೧).

೧೦. ಗಿರಡ್ಡಿ ಗೋವಿಂದರಾಜ : ಸಮಗ್ರ ವಿಮರ್ಶೆ, (ಸಪ್ನ ಬುಕ್ ಹೌಸ್, ಬೆಂಗಳೂರು: ೨೦೦೧).

೧೧. ಜಯಪ್ರಕಾಶ್ ಮಾವಿನಕುಳಿ : ರಂಗ ಪ್ರತಿಸ್ಪಂದನ (ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೨೦೦೧).

೧೨. ನಟರಾಜ್ ಹುಳಿಯಾರ್, ಕಾಳೇಗೌಡ ನಾಗವಾರ : ರಾಮ ಮನೋಹರ ಲೋಹಿಯಾರ ಬರಹಗಳು: ಸಂಪುಟ: ಎರಡು (ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ; ಬೆಂಗಳೂರು, ೧೯೯೮).

೧೩. ಪೂರ್ಣಚಂದ್ರ ತೇಜಸ್ವಿ, ಕೆ.ಪಿ. : ಸಹಜ ಕೃಷಿ ಪರಿಚಯ (ಪುಸ್ತಕ ಪ್ರಕಾಶನ, ಮೈಸೂರು: ೨೦೦೧).

೧೪. ಮಹಾಬಲೇಶ್ವರ ಭಟ್ಟ ಸಿ. (ಸಂ.) : ರಂಗಧಾಮ (ಸಪ್ನಬುಕ್ ಹೌಸ್, ಬೆಂಗಳೂರು: ೨೦೦೫).

೧೫. ರಂಗನಾಥರಾವ್ ಜಿ.ಎನ್. ರೆಘುನ್ ಕಥೆಗಳು ಕವಿತೆಗಳು ಒಗಟುಗಳು (ಅಂಕಿತ ಪುಸ್ತಕ, ಬೆಂಗಳೂರು, ೨೦೦೪).

೧೬. ಲಂಕೇಶ್ ಪಿ. (ಸಂ.) : ಅಕ್ಷರ ಹೊಸ ಕಾವ್ಯ (ಅಕ್ಷರ ಪ್ರಕಾಶನ, ಸಾಗರ)

೧೭. ಲಂಕೇಶ್ ಪಿ. : ಟೀಕೆ–ಟಿಪ್ಪಣಿ; ಸಂಪುಟ–೧ (ಪತ್ರಿಕೆ ಪ್ರಕಾಶನ, ಬೆಂಗಳೂರು: ೧೯೯೭).

೧೮. ವೆಂಕಟೇಶ್‌ಮೂರ್ತಿ ಹೆಚ್.ಎಸ್. : ಆಕಾಶದ ಹಕ್ಕು (ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೨).

೧೯. ಷೆಲ್ಡಾನ್ ಪೊಲಾಕ್, ಅಕ್ಷರ ಕೆ.ವಿ. (ಅನು) : ವಿಶ್ವಾತ್ಮಕ ದೇಶ ಭಾಷೆ, (ಅಕ್ಷರ ಪ್ರಕಾಶನ, ಸಾಗರ, ೨೦೦೩).

೨೦. ಸುಬ್ಬಣ್ಣ ಕೆ.ವಿ. : ನಮ್ಮ ತವಕ ತಲ್ಲಣಗಳು (ಅಭಿನವ, ಬೆಂಗಳೂರು: ೧೯೯೮).

೨೧. ಸುಬ್ಬಣ್ಣ ಕೆ.ವಿ. : ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು (ಅಕ್ಷರ ಪ್ರಕಾಶನ, ಸಾಗರ: ೨೦೦೦).

೨೨. ಸುಬಣ್ಣ ಕೆ.ವಿ., ಅಕ್ಷರ (ಅನು) : ಸಿನೆಮಾದ ದೂರಚಿತ್ರ ಸಮೀಪ ಚಿತ್ರಗಳು (ಅಕ್ಷರ ಪ್ರಕಾಶನ, ಸಾಗರ: ೧೯೮೦).

೨೩. ಸುಬ್ಬಣ್ಣ ಕೆ.ವಿ. (ಅನು) : ಸೆಜುವಾನ್‌ನಗರದ ಸಾಧ್ವಿ (ಅಕ್ಷರ ಪ್ರಕಾಶನ, ಸಾಗರ: ೧೯೮೭).

೨೪. ಸುಬ್ಬಣ್ಣ ಕೆ.ವಿ. (ಅನು) : ರಂಗದಲ್ಲಿ ಅಂತರಂಗ (ಅಕ್ಷರ ಪ್ರಕಾಶನ, ಸಾಗರ: ೨೦೦೦)

೨೫. ಸುಬ್ಬಣ್ಣ ಕೆ.ವಿ. (ಅನು) : ರೆಘುನ್ (ಅಕ್ಷರ ಪ್ರಕಾಶನ, ಸಾಗರ: ೨೦೦೪)

